"ಬಡವರ ಸೇವೆಯೇ ಭಗವಂತನ ಸೇವೆ."




ಸಂಪುಟ ೧. | ತಾರೀಕು ೧ನೇ ಫೆಬ್ರವರಿ ೧೯೩೩. | ಸಂಚಿಕೆ ೧೦.

# ನಾನೇನು ಬೇಡಲಾರೆ!

ಆನಂದಕವಿ— ಕುರುಗುಂದ.

ಬೇಡುವದು ಬೇಡೆನಗೆ ಕೇಳ್ಪುದೈ ಕರುಣಾಬ್ಧಿ ! ।
ಬೇಡುವದು ದುಃಖವೈ ! ಬೇಡದಲೆ ಸುಜನರಿಗೆ ।
ನೀಡುವಾ ಪುಣ್ಯವನು ನೀನಾಗಿ ಕೊಡುವುದೈ ! ನಾನೇನು ಬೇಡ
ಲಾರೆ ! ॥

ಬೇಡುವದು ಬೇಕಿಲ್ಲ ! ಬೇಕಾದುದೆನಗಿಲ್ಲ ! ।
ಆಡುವದು ಅರಿದಲ್ಲ ! ನೋಡುವದು ನಿಜವಲ್ಲ !
ಹಾಡುವಾ ಹರುಷವನು ನಾಡಿಂಗೆ ಕೊಡುವದೈ ! ನಾನೇನು ಬೇಡ
ಲಾರೆ ! ॥

ಬಡವರಿಗೆ ಬೆಲೆಯಿಲ್ಲ ! ಭಾರತಕೆ ಸರಿಯಿಲ್ಲ !
ಹುಡುಗರಿಗೆ ಮಿತಿಯಿಲ್ಲ ! ಹೊಟ್ಟೆಗೇ ಕೂಳಿಲ್ಲ !
ಕಡು ದೈನ್ಯ ಬಡುತಿರುವ ಕೃಷಿಕರನು ಪೊರೆವುದೈ ! ನಾನೇನು ಬೇಡ
ಲಾರೆ ! ॥

ಸಡಗರದಿ ಕುಣಿಯುತಿಹ ಅಧಿಕಾರಿಗರುವಿಲ್ಲ !
ಸಿಡುಕತನಕೆಣೆಯಿಲ್ಲ ! ಶಾಂತತೆಗೆ ನೆಲೆಯಿಲ್ಲ ! ।
ಬಡತನದಿ ಮಿಡುಕುತಿಹ ಭಾರತವ ಪೊರೆವುದೈ ! ನಾನೇನು ಬೇಡ
ಲಾರೆ ! ॥

ರಾಜರಿಗೆ ಮಿತಿಯಿಲ್ಲ ! ಪ್ರಜೆಗಳಿಗೆ ಸುಖವಿಲ್ಲ !
ಸೋಜಿಗಕೆ ನೆಲೆಯಿಲ್ಲ ! ಸಾಲಕ್ಕೆ ಕೊನೆಯಿಲ್ಲ ! ।
ಓಜೆಯುದು ಮೊದಲಿಲ್ಲ ! ಭೋಜನಕೆ ಗತಿಯಿಲ್ಲ ! ನಾನೇನು ಬೇಡ
ಲಾರೆ ! ॥

ಸೂಜಿ ಕರಮಣಿ ತಾಟ ತಬಕಕ್ಕೆ ಮಿತಿಯಿಲ್ಲ ! ।
ನೈಜಕ್ಕೆ ಕಳೆಯಿಲ್ಲ ! ನಾಣಿಲಿಯು ಜನಕಿಲ್ಲ !
ಸೋಜಿಗಕೆ ಮರುಳಾದ ಭಾರತವ ಪೊರೆವುದೈ ! ನಾನೇನು ಬೇಡ
ಲಾರೆ !

ಕಾಣುವದು ನಿಜವಲ್ಲ ! ಕಂಚಾಣ ಸ್ಥಿರವಲ್ಲ ! !
ದಾನಕ್ಕೆ ಎಣೆಯಿಲ್ಲ ! ಧರ್ಮಕ್ಕೆ ಚ್ಯುತಿಯಿಲ್ಲ !
ದೀನರಿಗೆ ದಯ ಮಾಡು ! ಕ್ಷೋಣೀಶ ! ಕರುಣಾಬ್ಧಿ ! ನಾನೇನು
ಬೇಡಲಾರೆ !

ಗಾಣಕ್ಕೆ ದಯೆಯಿಲ್ಲ ! ಗಗನಕ್ಕೆ ನೆಲೆಯಿಲ್ಲ !
ಜಾಣರಿಗೆ ಭಯವಿಲ್ಲ ! ಜಾತಿ ತಾ ನಿಜವಲ್ಲ ! ।
ಮಾಣದಲೆ ಪೊರೆವುದೈ ! ಧಾರುಣಿಯನೆಲ್ಲವನು ! ನಾನೇನು ಬೇಡ
ಲಾರೆ !

ಚಿತ್ತವಿದು ಸ್ಥಿರವಲ್ಲ ! ಚಿಂತೆಯುದು ತರವಲ್ಲ !
ಭೃತ್ಯನಿಗೆ ಭಯ ಹೊಲ್ಲ ! ಮಿಥ್ಯವಿದು ಜಗನೆಲ್ಲ !
ಸತ್ಯವನ್ನಾಡುವ ಮಹಾತ್ಮರಂ ಪೊರೆವುದೈ ! ನಾನೇನು ಬೇಡ
ಲಾರೆ !

ಸತ್ಯಕ್ಕೆ ಸಾವಿಲ್ಲ ! ಸುಳ್ಳಿಗೇ ಸುಖವಿಲ್ಲ !
ಮೃತ್ಯುವಿಗೆ ದಯೆಯಿಲ್ಲ ! ಮಾನಕ್ಕೆ ಸರಿಯಿಲ್ಲ !
ನಿತ್ಯಾತ್ಮ ನಿಜಯೋಗಿ ನಾಡನ್ನು ಪೊರೆವುದೈ ! ನಾನೇನು ಬೇಡ
ಲಾರೆ !

# ನಮ್ಮ ಪ್ರಥಮ ವರ್ಷದ ವಿಶೇಷ ಸಂಚಿಕೆ.

ಸಂಪಾದಕೀಯ.

'ಬಡವರ ಬಂಧು'ವಿನ ಪ್ರಥಮ ವರ್ಷವು ಎಪ್ರಿಲ್ ತಿಂಗಳಾಂತ್ಯದಲ್ಲಿ ಕೊನೆಗಾಣುತ್ತದೆ. ಇದರ ಸ್ಮರಣಾರ್ಥವಾಗಿ ನಾವು ಒಂದು ವಿಶೇಷ ಸಂಚಿಕೆಯನ್ನು ಹೊರಡಿಸಬೇಕೆಂಬ ಆಕಾಂಕ್ಷೆಯನ್ನು ಈ ಮೊದಲೇ ಕೆಲವು ಸಲ ಪ್ರಕಟಿಸಿರುವೆವು.

ಈ ಸಂಚಿಕೆಯನ್ನು ಹೊರಡಿಸುವ ಸಾಹಸವು ಸುಲಭ ತರದ್ದಲ್ಲವೆಂದು ನಮಗೆ ಪರಿಪೂರ್ಣ ವಿದಿತವಿದೆ. ಆದರೂ, ಅಧೈರ್ಯಗೊಂಡು ಹಿಂಜರಿದುಬಿದ್ದು, ಅನುಭವದ ಸವಿಯನ್ನು ಸವಿಯುವ ಸುಸಂಧಿಯನ್ನು ಬಿಟ್ಟುಬಿಡಬಾರದೆಂದು ನಾವು ಸಂಕಲ್ಪಿಸಿ ಈ ಉದ್ಯಮಕ್ಕೆ ಪ್ರವೃತ್ತರಾಗುತ್ತೇವೆ. ಪ್ರತಿಭಾ ಸಂಪನ್ನರಾದ ಲೇಖಕರ ಉದಾರಾಶ್ರಯ, ಉದಾರಿಗಳಾದ ಜಾಹೀರಾತುದಾರರ ಬೆಂಬಲ, ಬೆಂಬಲದಂತಿರುವ ಗ್ರಾಹಕರ ಸಹಾನುಭೂತಿ–ಹಾಗೂ, ಸಮಸ್ತ ಕನ್ನಡಿಗರ ಆಶೀರ್ವಾದವು ನಮಗೆ ಲಭಿಸಿದ್ದೇ ಆದರೆ, ಈ ವಿಶೇಷ ಸಂಚಿಕೆಯ ಸಾಹಸದಲ್ಲಿ ನಾವು ಯಶಸ್ವಿಗಳಾಗುವುದರಲ್ಲಿ ಸಂದೇಹವಿರದು.

ಈ ಸಂಚಿಕೆಯು 'ಬಡವರ ಬಂಧು'ವಿನ ಆಕಾರದ ಸುಮಾರು ೧೦೦ ಪುಟಗಳ ಸಚಿತ್ರ ಗ್ರಂಥದ ರೂಪವನ್ನು ತಾಳಬೇಕೆಂದೂ, ಅದು ಕನ್ನಡ ಸಾಹಿತ್ಯ ಪುಷ್ಪೋದ್ಯಾನದಲ್ಲಿ ಮನಾಕರ್ಷಕ ಗುಲಾಬಿ ಹೂವಿನಂತಾಗಬೇಕೆಂದೂ, ಅದರಲ್ಲಿ ಬಡವರ ಜೀವನ, ಉದ್ಧರಣೆಗೆ ಸಂಬಂಧಪಟ್ಟ, ಕಥೆ, ಕವನ ಮೊದಲಾದ ವಿವಿಧ ಲೇಖನಗಳು ಬರಬೇಕೆಂದೂ ನಮ್ಮ ಆಶಯವಿರುತ್ತದೆ. ಕೆಲವು ಹಾಫ್ ಟೋನ್ ಚಿತ್ರಗಳನ್ನು ಆರ್ಟ್ ಪೇಪರಿನ ಮೇಲೆ ಮುದ್ರಿಸಿ ಅದನ್ನು ಸುಂದರಗೊಳಿಸಬೇಕೆಂದೂ ಇದೆ.

ಕನ್ನಡ ಮಾತೆಯ ಸೇವಕರಲ್ಲಿ ಬಹು ಎಳೆಯರಾದ ನಮಗೆ ತಮ್ಮ ನಿತ್ಯದ ಔದಾರ್ಯದಿಂದ, ನಮ್ಮೀ ಅರಿಕೆಯನ್ನು ಎಷ್ಟಕ್ಕೂ ಮರೆಯದೆ, ಬಡವರಿಗೆ ಸಂಬಂಧಿಸುವ ಲೇಖನಗಳನ್ನು ದಯವಿಟ್ಟು ಕಳುಹಿಸಿಕೊಡಬೇಕೆಂದು ಮೈಸೂರಿನ ವೃದ್ಧ ಪಿತಾಮಹ ಎಮ್. ವೆಂಕಟ ಕೃಷ್ಣಯ್ಯ ಶ್ರೀ. ಎಮ್. ಎ. ದೊರೆಸ್ವಾಮಯ್ಯಂಗಾರ್, ಎಮ್. ಎ. ಬಿ. ಎಲ್., ಶ್ರೀ. ಜಿ. ಪಿ. ರಾಜರತ್ನಂ, ಎಂ. ಎ., ಶ್ರೀ. ಜಿ. ಆರ್. ಜೋಸ್ಸರ್, ಎಮ್. ಎ. ಎಫ್. ಆರ್. ಇ. ಎಫ್., ಶ್ರೀ. ತೀ. ನಂ., ಶ್ರೀಕಂಠಯ್ಯ, ಎಮ್. ಎ. ಮಹಾರಾಜಾ ಕೊಲೇಜು; ಬೆಂಗಳೂರಿನ ಶ್ರೀ. ಎಸ್. ಜಿ. ಶಾಸ್ತ್ರಿ, ಬಿ. ಎ. ಎಂ. ಎಸ್. ಸಿ. ಶ್ರೀಮತಿ ಆರ್. ಕಲ್ಯಾಣಮ್ಮ, ಶ್ರಿ. ಅ. ನ. ಕೃಷ್ಣರಾಯ, ಶ್ರೀ. ಬಿ. ಎಮ್. ಶ್ರೀಕಂಠಯ್ಯ, ಎಮ್. ಎ. ಎಲ್. ಟಿ., ಶ್ರೀ. ಮಾಸ್ತಿ ವೆಂಕಟೇಶಯ್ಯಂಗಾರ್, ಶ್ರೀ. ಎಮ್. ರಾಮರಾವ್, ಡಾ. ಕೆ. ಎನ್. ಕಿಣಿ, ಎಮ್. ಎ. ಪಿ. ಎಚ್‌ಡಿ., ಮದ್ರಾಸಿನ ಶ್ರೀ. ಬೆನಗಲ್ ರಾಮರಾವ್, ಎಮ್.ಎ.ಎಲ್.ಟಿ, ಬೆಳಗಾಂವಿ; ಶ್ರೀ ರಾಮಚಂದ್ರ, ಧಾರವಾಡದ ಶ್ರೀ. ಬೇಂದ್ರೆ ದತ್ತಾತ್ರೇಯರು, ಪ್ರೊ. ಕುಲಕರ್ಣಿ ನಾರಾಯಣ ರಾವ್, ಎಮ್. ಎ. ಎಲ್. ಎಲ್. ಬಿ. ಕರ್ಣಾಟಕ ಕೊಲೇಜು, ಶ್ರೀಮಂತ ರಾಜಾ ಕಾರವಾನಕರ ಶ್ರೀನಿವಾಸ ರಾವ, ಬಿ. ಎ. ಹೊನರ್ಸ್, ಬಾರ್ ಆಟ್ ಲೋ, ಹೈದರಾಬಾದ್, ಡೆಕ್ಕಾನ್; ಪ್ರೊ. ನಾಡಕರ್ಣಿ ಬಿ. ಎ. ಎಮ್. ಎಸ್. ಸಿ. ಸೈಂಟ್ ಜೆವಿಯರ್ ಸ್ಕೂಲ್, ಮುಂಬಾ ಡಿ. ಕೆ. ಭೀಮಸೇನ ರಾವ್, ಎಮ್. ಎ. ಉಸ್ಮಾನಿಯಾ ಕೊಲೆಜ್, ಹೈದರಾಬಾದ್ ಪಿ. ರಾಮಚಂದ್ರ ಪೂನ, ಶ್ರೀಮತಿ ಡಿ. ಸಾಕಮ್ಮ, ಮಡಿಕೇರಿ. ಕಾರ್ಕಳದ ಶ್ರೀಮತಿ ಪಣಪಿಲ ದೇಜಮ್ಮ, ಶ್ರೀ. ಎನ್. ಎಸ್. ಜೈನಿ; ಉಡುಪಿಯ ಶ್ರೀ. ಎನ್. ರಾಜಗೋಪಾಲಕೃಷ್ಣರಾವ್, ಕಾಸರಗೋಡು ಪುಂಡೂರು ಲಕ್ಷ್ಮೀನಾರಾಯಣ ಪುಣಿಂಚತ್ತಾಯ, ಪುತ್ತೂರಿನ ಶ್ರೀ. ಶಿವರಾಮ ಕಾರಂತ, ಶ್ರೀ. ಜಿ. ಲಕ್ಷ್ಮಣ ಪೈ, ಮಂಗಳೂರಿನ ಶ್ರೀ. ಎಮ್. ಎನ್. ಕಾಮತ್, ಶ್ರೀ. ಶಂಕರ ಭಟ್. ಶ್ರೀ. ಕಾಂತಪ್ಪ ಶೆಟ್ಟಿ. ಶ್ರೀ. ವಿ. ಎಸ್. ಕುಡ್ವ, ಶ್ರೀ. ಹುರುಳಿ ಭೀಮ ರಾವ್, ಶ್ರೀ. ಕುಡ್ಪಿ ವಾಸುದೇವ ಶೆಣೈ, ಶ್ರೀ. ಪೇಜಾವರ ಸದಾಶಿವ ರಾವ್, ಶ್ರೀ. ವಿದ್ವಾನ್ ಟಿ. ನಾರಾಯಣ ಭಟ್, ಇವರೇ ಮೊದಲಾದವರಿಗೆ ಬರೆದುಕೊಂಡಿರುತ್ತೇವೆ. ಅಲ್ಲದೆ ಇನ್ನಿತರ ಉದ್ದಾಮ ಲೇಖಕರನ್ನು ಖುದ್ದಾಗಿ ಸಂದರ್ಶಿಯೂ, ಪತ್ರ ಮುಖೇನವೂ ಬೇಡಿಕೊಂಡಿರುತ್ತೇವೆ. ಈ ಮಹಾಶಯರುಗಳೆಲ್ಲರೂ ನಮ್ಮನ್ನು ತಮ್ಮ ಲೇಖನ ದಾನದಿಂದ ಹರಸಿ ಪ್ರೋತ್ಸಾಹಿಸಬೇಕೆಂದು ಪುನಃ ಪುನಃ ಬೇಡಿಕೊಳ್ಳುತ್ತೇವೆ.

# ಶಾಂತಿಯ ದುರದೃಷ್ಟ!

ಲೇಖಕರು:—ಶ್ರೀ. ಹರಿರಾಮ ಶೆಣೈ, ಕೊಡಿಯಾಲಬೈಲು.



ಈ ಹಣವೆಂಬದು ಏನನ್ನೆಲ್ಲ ಮಾಡುವುದಿಲ್ಲ! ಮಾಡುತ್ತಿಲ್ಲ!! ಮಾಡಲಿರುವುದಿಲ್ಲ!!! ಸಾಧ್ಯವಿಲ್ಲದುದನ್ನು ಸಾಧ್ಯಗೊಳಿಸುವುದು ಹಣ! ಜೀವನಕ್ಕೂ ನಾಶಕ್ಕೂ ಹಣ! ಒಬ್ಬನ ಉನ್ನತಿ, ಇನ್ನೊಬ್ಬನ ಅವನತಿಗೆ ಕಾರಣ ಹಣ! ಎಲ್ಲೆಲ್ಲೂ ಹಣ! ಎಲ್ಲಕ್ಕೂ ಹಣ! ಎಲ್ಲರಿಗೂ ಹಣ!

ಶಾಂತಿಯು ಸೀತಾರಾಮಣ್ಣನವರ ಏಕಮಾತ್ರ ಪುತ್ರಿ. ಅಲ್ಪ ವಿದ್ಯಾವತಿ; ಬಹಳ ರೂಪವತಿ; ಗುಣವತಿ; ಸೀತಾರಾಮಣ್ಣನವರ ಬಡತನದ ದೆಸೆಯಿಂದಾಗಿ ಶಾಂತಿಯು ಹದಿನೈದು ವರ್ಷ ದಾಟಿದರೂ ತಂದೆಯ ಮನೆಯಲ್ಲೇ ಉಳಿದು ಸಮಾಜದವರ ನಿಂದೆಗೊಳಗಾಗಬೇಕಾದ ದೌರ್ಭಾಗ್ಯವೊದಗಿತ್ತು! ಸೀತಾರಾಮಣ್ಣನವರು ಕಾಸರಗೋಡಿನ ಬೆಂಚ್‌ಕೋರ್ಟ್ ಜಗಲಿ—ಗುಮಾಸ್ತರು. ಅಂದರೆ ಕೋರ್ಟಿನ ಬಾಗಿಲ ಬಳಿ ಒಂದು ಜಗಲಿಯ ಮೂಲೆಯಲ್ಲಿ ಚಾಪೆಯೊಂದನ್ನು ಹಾಸಿ, ಕುಳಿತು, ತನ್ನ ತೊಡೆಗಳೆರಡನ್ನು ಮೇಜು ಎಂದು ಭಾವಿಸಿ, ಪಟೇಲರುಗಳಿಗೋ, ನಿರಕ್ಷರಸ್ಥರಾದ ಹಳ್ಳಿಗರಿಗೋ ದಸ್ತಾವೇಜು, ಅರ್ಜಿ ಮೊದಲಾದುವುಗಳನ್ನು ಬರೆದು ಕೊಟ್ಟು, ಸಿಕ್ಕಿದ ಹಣದಿಂದ ತನ್ನ ಕುಟುಂಬ ಪೋಷಣೆಯನ್ನು ಹೇಗೋ ಮಾಡುತ್ತಿದ್ದರು! ಸೀತಾರಾಮಣ್ಣನವರು ವಿರಕ್ತ ಸ್ವಭಾವದವರು. ಐಹಿಕ ಆಡಂಬರಗಳಿಗೆ ಅವರು ತಲೆಯೊಡ್ಡುವಂತೆಯೇ ಇದ್ದಿಲ್ಲ. ಪರನಿಂದೆ, ಮಾಯೆ, ಇವುಗಳೆಲ್ಲ ಅವರನ್ನು ತಳಮಳಿಸುವಷ್ಟು ಶಕ್ತಿಯುತವಾಗಿದ್ದಿಲ್ಲ ಆದರೆ,—

ಸೀತಾರಾಮಣ್ಣನವರ ಪತ್ನಿ ಕಲ್ಯಾಣಿ ದೇವಿಯು ಅವರ ಎಲ್ಲಾ ಗುಣಗಳಿಗೆ ತೀರ ವಿರೋಧ! ಈ ದಂಪತಿಗಳು ಕಳೆದ ಹದಿನಾರು ವರ್ಷಗಳಿಂದ ಹೇಗೆ ನೆಮ್ಮದಿಯಿಂದ ದಿನ ದೂಡಿದರೋ ಎಂದು ನಮಗೇನೆ ಆಶ್ಚರ್ಯವಿದೆ! ಕಲ್ಯಾಣಿಗೆ ಪರರ ದುಡ್ಡೆಂದರೆ ಆಶೆಯ ಗಂಟು. ಪರನಿಂದೆಯಲ್ಲೋ!—ಅವಳು ಊರವರ ಗಾದೆಗೆ ಗುರಿಯಾಗಿದ್ದಳು.

ಒಂದು ದಿನ ಸೀತಾರಾಮಣ್ಣನವರು ಲೇಖನಿಯನ್ನು ಕಿವಿಯೆಡೆಯಲ್ಲಿ ನಿಲ್ಲಿಸಿ ಶಾಯಿಯ ದಪ್ಪಿಯನ್ನು ನೋಡುತ್ತಾ ಕೋರ್ಟಿನ ಜಗಲಿಯ ಮೇಲೆ ಮೌನವಾಗಿ ಕುಳಿತಿದ್ದರು. ಅಷ್ಟರಲ್ಲಿ ಅವರ ಜಾತಿಗೃಹಸ್ಥರಾದ ಪಟೇಲರೊಬ್ಬರು ಒಂದು ಅರ್ಜಿ ಬರೆಸುವ ನೆವದಿಂದ ಅಲ್ಲಿಗೆ ಬಂದರು. ಅರ್ಜಿಯ ಒಕ್ಕಣೆಯ ಕುರಿತು ಮಾತುಕಥೆ ನಡೆಯಿತು. ಕ್ರಮೇಣ ಅದರ ವಿವರವು ಸ್ವವಿಷಯಗಳ ಸಂಬಂಧತೆಯೊಡನೆ ಹರಡಿ, ಸೀತಾರಾಮಣ್ಣನವರು ತನ್ನ ಸ್ಥಿತಿಯನ್ನೋ, ತನ್ನ ಮನೆಯ ಗತಿಯನ್ನೋ, ಜನ್ನ ಪಟೇಲರು ತನ್ನ ಸುಸ್ಥಿತಿಯನ್ನೋ, ತನ್ನ ಶ್ರೀಮಂತಿಕೆಯ ಅಳತೆಯನ್ನೊ ಬಣ್ಣ ಹಚ್ಚಿ ಹೇಳಿಕೊಂಡರು. ಪಾಪ! ಜನ್ನ ಪಟೇಲರು ಹೇರಳ ಐಶ್ವರ್ಯವಂತರಾಗಿದ್ದರೂ, ವ್ಯಭಿಚಾರ, ಜಂಭ, ಮೋಸಗಳಲ್ಲಿ ಅಗ್ರಗಣ್ಯರಿದ್ದು, ತೃತೀಯ ಪತ್ನಿಯ ಅನ್ವೇಷಣದ ವಂಚಿಕೆಯಿಂದ ತನ್ನಲ್ಲಿಗೆ ಬಂದಿರುವರೆಂದು ಸೀತಾರಾಮಣ್ಣನವರಿಗೆ ಹೇಗೆ ಗೊತ್ತು? ಜೇಬಿನೊಳಗಿದ್ದ ಕೆಲವು ರೂಪಾಯಿಗಳನ್ನು, ಅಂಗಿಯ ಮೇಲಿನ ದೂಳನ್ನು ಒರಸುವ ನೆವದಿಂದ ಗಿಜಿಗಿಜಿಸಿದರು. 'ನಾಳೆ ಬರುತ್ತೇನೆ' ಎಂದು ಹೊರಟರು.

ಕೆಲವು ದಿನಗಳಲ್ಲೇ ಊರಲ್ಲೆಲ್ಲಾ ಸುದ್ದಿ: ಅರುವತ್ತು ವರ್ಷ ಪ್ರಾಯದ ಜನ್ನ ಪಟೇಲರಿಗೆ ಮೂರನೆಯ ಹೆಂಡತಿಯಾಗಿ ಹದಿನೈದು ವರ್ಷದ ಶಾಂತಿಯನ್ನು ವಿವಾಹಮಾಡಿಕೊಡುತ್ತಾರಂತೆ! ಏನು ಕಲಿಕಾಲ! ಎಂದು.

ಸೀತಾರಾಮಣ್ಣ ಕಲ್ಯಾಣಿಯುವರನ್ನು ಒಬ್ಬೊಬ್ಬರು ಒಂದೊಂದು ರೀತಿಯಿಂದ ನಿಂದಿಸಿದರು. ಒಬ್ಬನು "ಮುದಿಯನಿಗೆ ಮದುವೆಯೇಕೆ?" ಎಂದನು. ಇನ್ನೊಬ್ಬನು "ಶಾಂತಿಗೆ ಶಾಂತವಾದೀತೆ?" ಎಂದನು. ಒಬ್ಬಳು "ಹುಡುಗಿಯನ್ನು ಕಲ್ಲುಕಟ್ಟಿ ನೀರಿಗೆ ಹಾಕಬಹುದಿತ್ತಲ್ಲಾ?" ಎಂದಳು. "ಮುದಿಯನಿಗೆ ಎರಡು ಮದುವೆಯಾಗಿ ಇಬ್ಬರನ್ನೂ ಬಿಟ್ಟದು ಸೀತಾರಾಮಣ್ಣನಿಗೆ ಗೊತ್ತಿಲ್ಲವೇ?" ಎಂದು ಒಬ್ಬಳು ಮುದುಕಿಯು ಬೇಸರಿಸಿದಳು.

"ಸುಧಾರಕ ಸಂಘ"ದ ಪ್ರೆಸಿಡೆಂಟರು ಸ್ವಯಂಸೇವಕರ ಮೂಲಕ ಈ ವಿವಾಹವನ್ನು ಮುರಿಯಬೇಕೆಂದು ಶತಪ್ರಯತ್ನಗೈದರು. ಆದರೂ ಆಗಲಿಲ್ಲ—ಸಾಗಲಿಲ್ಲ. ಕಲ್ಯಾಣಿ ದೇವಿಯ ಬಾಯಿಯು ದೊಡ್ಡದಾಯಿತು. ಅಳಿಯನಲ್ಲಿನ ಹಣದಾಶೆಯು ಅವಳ ನೆತ್ತಿಗಡರಿತು. ಗಲಾಟೆಯಾಗುತ್ತಿರುವುದನ್ನು ಕಂಡು ಶಾಂತಿಯು ತನ್ನ ಮಿತ್ರಳೊಡನೆ "ನಾನೇನು ಗೈಯಲಿ? ಯಾರೊಡನೆ ಹೇಳಲಿ?" ಎಂದಳು.

× × × × × × × ×

ಮದುವೆಯು ಜರಗಿ ಮೂರು ವರ್ಷಗಳು ದಾಟಿದುವು. ವಾಚಕರೇ, ಶಾಂತಿಗೆ ಮೂರು ಮಕ್ಕಳಿವೆ! ಈ ಮಕ್ಕಳ ತಂದೆಯು ಮುದುಕನೆಂದು ಅವುಗಳ ರೂಪದಿಂದಲೇ ತಿಳಿಯಬಹುದಾಗಿದ್ದಿತು. ಒಂದರ ತಲೆ ಮಡಿಕೆಯಂತೆ ದೊಡ್ಡದು. ಕಣ್ಣುಗಳೋ, ಬಹು ಸಣ್ಣವು. ಒಂದರ ಮೂಗು ವಿಪರೀತ ಸಣ್ಣದು—ಚಪ್ಪಟೆ ಹಣೆಯೂ ನಾಲ್ಕು ಇಂಚು ಮುಂದೆ ಬಂದಿದೆ. ಮತ್ತೊಂದನ್ನು ಬಣ್ಣಿಸುವುದೇ ಬೇಡ! ಕೈಕಾಲುಗಳು ಕಡ್ಡಿಗಳಂತೆ—ಹೊಟ್ಟೆಯೋ ದೊಡ್ಡ ತಲೆದಿಂಬಿನಂತೆ! ಇಬ್ಬರು ಹೆಂಡಂದಿಯರಲ್ಲಿ ಒಂಭತ್ತು ಮಕ್ಕಳಿರುವ ಮುದಿ ಜನ್ನ ಪಟೇಲರಿಗೆ ಅವರ ಈ ಮೂರನೇ ಪತ್ನಿಯಲ್ಲಿ ಎಷ್ಟು ಬಲಶಾಲಿ ಮಕ್ಕಳು ಹುಟ್ಟಿಯಾವು?

ಒಂದು ದಿನ ಆದಿತ್ಯವಾರ ಪಟೇಲರು ಬೆಳಿಗ್ಗೆ ಎದ್ದುಕೊಂಡು ಹೊಲಕ್ಕೆ ಹೋಗಿ ಹಿಂದಿರುಗಿದರು. ಬಂದವರೇ ತಲೆ ತಿರುಗುತ್ತದೆಂದು ಮಂಚದ ಮೇಲೆ ಕೈಕಾಲು ಬಿಟ್ಟು ಮಲಗಿದರು. ಮೊದಲೇ ಮುದಕ, ಅದರಲ್ಲೂ ಹದಿನೆರಡು ಮಂದಿ ಮಕ್ಕಳ ತಂದೆ. ರೋಗ ರುಜನೆಗಳ ಸಹನಾಶಕ್ತಿಯು ಎಷ್ಟಿದ್ದೀತು? ಮಂಚದ ಮೇಲೆ ಮಲಗಿದ ಜನ್ನರು ಜನಾರ್ಧನನ ಪಾದಾರವಿಂದವನ್ನೇ ಸೇರಿದರು!

ಈಗ ನೋಡಿ, ಹತ್ತೊಂಭತ್ತು ವರ್ಷ ಪ್ರಾಯದ ವಿಧವೆ. ಅದರೆ ಮೂರು ನಿಷ್ಪ್ರಯೋಜಕ ಮಕ್ಕಳಿವೆ. ಇವುಗಳನ್ನು ಎಲ್ಲಿಗ್ಗೊಯ್ಯಾಳು? ಸುಖವುಂಟೇ? ಮೂಗುಮೂಗುತಿ ಓಲೆಗಳನ್ನು ಕಳಚಿ, ಅಪಶಕುನದ ಚಿಹ್ನೆಯಾಗಿ ಮನೆಯ ಮೂಲೆಯಲ್ಲಿರುವ ಶಾಂತಿಯ ದುರದೃಷ್ಟವನ್ನೇನ್ನಲಿ? ಮೂರೇ ಮೂರು ವರ್ಷಗಳ ಮೊದಲು ಅವಳು ಗೃಹದ ಬೆಳಕಿನಂತಾಗಿದ್ದಳು; ಹೆತ್ತವರ ಆಶೆಯ ಬದುಕಾಗಿದ್ದಳು.

ಕಲ್ಯಾಣಿಯು ಈಗ ಹೀಗೆ ಹೇಳುತ್ತಾಳೆ. "ಮುದುಕನಿಗೆ ಹೆಣ್ಣು ಕೊಟ್ಟವರ ಗತಿಯೇ ಹೀಗೆ!" ಇವಳಂತೆ ಕಳವಳಿಸುವ ಎಷ್ಟು ಬಡ ಕುಟುಂಬಗಳಿಲ್ಲ!

[ಶಾರದಾ ಮಸೂದೆಯಿದ್ದರೂ ಇಂತಹ ಎಷ್ಟೋ ವಿವಾಹಗಳಾಗುತ್ತಿರುವುದು. ಭಾರತೀಯರ ದುರದೃಷ್ಟವೇ ಸರಿ!—ಸಂಪಾದಕ.]

—೦—೦—೦—೦—



# ಪೈಶಾಚಿಕ ಸೌಂದರ್ಯ.



ಲೇಖಕರು:—ಎಮ್. ಆಚಾರ್ಯ, ಬರ್ಲಿನ್.

**ಈಗಿನ ಸೌಂಧರ್ಯ ಭಾವನೆಯು ಅಹಂಕಾರವನ್ನೂ ವ್ಯಾಪಾರೀ ಬುದ್ಧಿಯನ್ನೂ ಗಳಿಸುವುದು; ನಿಜಕ್ಕೂ ಅದರಿಂದ ತನ್ನ ಆತ್ಮವೂ ಆನಂದವೂ ನಾಶವಾಗದಿರವು.**



ಸಾವಿರಾರು ಜನರು, ಇಂದು ಹೊಟ್ಟೆಬಟ್ಟೆಗಿಲ್ಲದೆ ನರಳುತ್ತಿರುವ ಈ ಕಾಲದಲ್ಲಿ, ತಾನು ಇತರರಿಗಿಂತಲೂ ಸುಂದರವಾಗಿ ಕಾಣಿಸಬೇಕೆಂಬ ಲವಲವಿಕೆಯು ಅಸಭ್ಯ ಭಾವನೆಯಲ್ಲವೇನು? ಪರರಿಂದ ಸುಲಿದ ಹಣವೇ ಅವರಿಗೆ ಇಂಥ ಸೌಂದರ್ಯವನ್ನು ಕೊಡುವುದೆಂದು ಬಿಡಿಸಿ ಹೇಳಬೇಕೆ? ತೀರ ಅನಾಗರಿಕ ಕಾಲದಲ್ಲಿನ ಜನರು, ಮನುಷ್ಯರನ್ನು ತಿನ್ನುತ್ತಿದ್ದರಂತೆ. ಹಾಗೆ ಕೊಂದು ತಿಂದು, ಅವರ ತಲೆಬುರುಡೆಗಳ ಮಾಲೆಯೊಂದನ್ನು ಧರಿಸಿಕೊಂಡು ತಮ್ಮ ದೇಹವನ್ನು ಶೃಂಗರಿಸಿಕೊಳ್ಳುತ್ತಿದ್ದರಂತೆ. ಈಗಿನ ಶ್ರೀಮಂತರ ಸೌಂದರ್ಯದ ಕಾಂಕ್ಷೆಯು ಅಷ್ಟೇ ಹೀನವಾಗಿ ಕಾಣಿಸುವುದಿಲ್ಲವೇನು?

ಅವರು ಬಯಸುವ ಸೌಂದರ್ಯವಾದರೂ ಏನು? ಎಲ್ಲರಿಂದಲೂ ಕೊಳ್ಳಲು ಸಾಧ್ಯವಿಲ್ಲದ, ಅಮೂಲ್ಯ ಒಡವೆಗಳನ್ನು ತಾವು ಕೊಂಡು, ಮೈಮೇಲೆ ಧರಿಸಿಕೊಳ್ಳುವುದು. ಪರರು ಸತ್ತರೂ ಚಿಂತೆಯಿಲ್ಲ. ತಮಗೆ ಅವು ದೊರಕಿದರಾಯಿತು; ತಮಗೆ ಅವು ದೊರೆತರೇನೆ ಸಂತೋಷ—ಎನ್ನುವ ಮನೋವೃತ್ತಿಯು ಅವರದು. ಅವರು ಹೀಗೆ ಗಳಿಸಿಕೊಂಡ ಸೌಂದರ್ಯವನ್ನು ಕಂಡು ಮಿಕ್ಕವರು ಅವರನ್ನು ಗೌರವಿಸಬೇಕು. ಈ ಲಾಲಸೆಯು ತೀರ ಪೈಶಾಚಿಕ ಲಾಲಸೆಯಲ್ಲವೇನು?

ಆಭರಣ, ಉಡುಗೆಗಳಿಂದಲ್ಲದೆ ಇನ್ನೂ ಹಲವು ವಿಧಗಳಿಂದ ಶೃಂಗಾರವನ್ನು ಮಾಡಿಕೊಳ್ಳುವರು. ತಲೆಕೂದಲನ್ನು ಶೃಂಗರಿಸುವುದು, ಮುಖವನ್ನು ವರ್ಣಿಕೆಗಳಿಂದ ಸವರಿಕೊಳ್ಳುವುದು, ಸುಗಂಧ ದ್ರವ್ಯಗಳನ್ನು ಉಪಯೋಗಿಸುವುದು—ಇವೇ ಎಲ್ಲ. ಇವುಗಳ ಉದ್ದೇಶವೇನು? ಎಲ್ಲರ ಗಮನವೂ ತಮ್ಮ ಕಡೆಗೆ ಆಕರ್ಷಿಸಲ್ಪಡಬೇಕೆಂಬುದೇ ಅಲ್ಲವೆ?

ಕೃತಕ ವರ್ಣಿಕೆಯಿಂದ ತನ್ನ ಮುಖವನ್ನು ಶೃಂಗರಿಸಿಕೊಂಡ ನಾರಿಯೊಬ್ಬಳು—“ಹೇಗೆ ನನ್ನ ಮುಖವು ಆಕರ್ಷವಾಗಿ ಕಾಣಿಸುವುದೇ?” ಎಂದು ಕೇಳಿದರೆ ಏನು ಹೇಳಬೇಕು? ಹೀಗೆ ಕೇಳದಿದ್ದರೂ ಮನಸ್ಸಿನಲ್ಲಿ ಕೋರಿಯೇ ಕೋರುವಳು. ಪರರು ಅವಳನ್ನು ಕಂಡು ಅವಳ ಸೌಂದರ್ಯ ವಿಮರ್ಶೆಗೆ ಹೊರಟರೆ ಅವಳಿಗೇನು ಆನಂದ? ವೇಶ್ಯೆಯರಂತಾಯಿತು! ಅವಳ ಮನ, ಅವಳಿಗೆ ತನ್ನಲ್ಲೇ ಆನಂದವಿಲ್ಲ. ಪರರು ತನ್ನಿಂದ ಆಕರ್ಷಿಸಲ್ಪಡುವ ತನಕ ಅವಳಿಗೆ ಸಂತೋಷವಿಲ್ಲ. ಅದಕ್ಕಾಗಿ ಅವಳು ಕಾದು ಕುಳಿತಿರುವಳು. ನಿಜಕ್ಕೂ, ಪರರ ಕಣ್ಣಿಗೆ ತಂಪನ್ನು ಕೊಡಲು ಅವಳು ಬದುಕುವವಳು.

ವೇಶ್ಯೆಯಂತೆ, ತನ್ನ ಮುಖ ವರ್ಣಿಕೆಯಿಂದವಳು ಪರರಿಗಾನಂದವನ್ನುಂಟುಮಾಡಿ ಅವರು ತನ್ನನ್ನು ಕಂಡು ಅಭಿನಂದಿಸುವಂತೆ ಮಾಡುವಳು. ಇದರ ನಿಜವಾದ ತಾತ್ಪರ್ಯವೇನು? ಅವಳೊಂದು ಮಣ್ಣುಗೊಂಬೆ. ಪರರು ತನ್ನನ್ನು ಅಭಿಮಾನದಿಂದ ಕಾಣಲಿ ಎಂದು ಬಯಸುವ ಪ್ರತಿಮೆ. ಅವಳನ್ನು ಸ್ತುತಿಸುವವರ ಕಡೆಗೆ ಅವಳ ಭಾವನೆಗಳು ಹೇಗೆ ಪರರಿಗಿಂತ ತಾನು ಸುಂದರವಾಗಿ ಕಾಣಿಸಬೇಕೆನ್ನುವ ಅವಳಿಗೆ, ಪರರ ಮೇಲೆ ಅಭಿಮಾನ ಗೌರವಗಳು ಉಂಟಾಗಲಾರವು. ಪರರ ಪಾಲಿಗೆ ಅವಳ ಭಾವನೆಗಳು ಮೃತವಾದಂತೆಯೇ ಸರಿ! ಇಂಥದ್ದೊಂದು ಮಣ್ಣುಗೊಂಬೆಯು ಬಳಿಗೆ ಹೋಗಿ, ನನ್ನ ಹೃದಯವನ್ನು ನಾನೆಂದಿಗೂ ಒಪ್ಪಿಸಲಾರೆ. ಇಂದೊಂದು ಪ್ರಾಣಿಗಿಂತ ತನ್ನಲ್ಲೇ ಜೀವವಿದ್ದು, ಪರರ ಮೇಲೆ ಅಭಿಮಾನ ಕರುಣೆಗಳಿರುವ, ಬಾಹ್ಯ ಶೃಂಗಾರ ವಿರಹಿತವಾದ, ಕುರೂಪಿಯೇ ಲೇಸಲ್ಲವೇ? ಅಂಥ ಕುರೂಪಿಯನ್ನು ಬಯಸವುದರಿಂದಲಾದರೂ ಹೆಚ್ಚಿನ ಸುಖವಿದೆ.

ಈ ರೀತಿಯ ಬಣ್ಣಬೆಡಗುಗಳಿಲ್ಲದ ಸೌಂದರ್ಯ ಸಾಧನೆಗಳೂ ಇವೆ. ಅಂತಹವನ್ನು ಉಪಯೋಗಿಸುವವರ ಮನೋವೃತ್ತಿಯಾದರೂ ಹಾಗೆಯೇ ಸರಿ. ತಾವು ಪರರಿಂದ ಸ್ತುತಿಸಲ್ಪಡಬೇಕೆಂಬುದೇ ಅವರ ಬಯಕೆ. ತಮ್ಮನ್ನು ತಾವು ಕೊಂಡಾಡಿಕೊಳ್ಳುವುದರಲ್ಲಿ, ಹಾಗೆ ಇತರರು ಕೊಂಡಾಡಬೇಕೆಂದು ಬಯಸುವುದರಲ್ಲೇ ಅವರ ಆತ್ಮದ ನಾಶವಾಯಿತು. ಅವರ ಚಿತ್ತವು ಎರಡು ಬಗೆಯ ಆಸೆಗಳನ್ನು ಹಿಡಿಯುವುದು. ನನ್ನ ಸೌಂದರ್ಯವು ಅವನನ್ನು ಆಕರ್ಷಿಸುತ್ತಿದೆಯೇ? ಅವನಿಂದ ನಾನೇನಾದರೂ ಲಾಭವನ್ನು ಕೇಳಬಹುದೆ?—ಎಂದು.

ಹೀಗಾಗಿ, ಈ ಸೌಂದರ್ಯದ ಭಾವನೆಯು, ಎಂಥದೇ ಇರಲಿ, ಅಹಂಕಾರವನ್ನೂ, ವ್ಯಾಪಾರೀ ಬುದ್ಧಿಯನ್ನೂ ಗಳಿಸುವುದು. ತನ್ನ ಸೌಂದರ್ಯವನ್ನು ಪರರಿಗೆ ತೋರಿಸಿ, ಅವರನ್ನು ಬೆರಗುಮಾಡಿ, ಅದರಿಂದಲೇನಾದರೂ ಲಾಭಹೊಂದುವಂತೆ ಮಾಡುವ ಯತ್ನದಿಂದೇನು ಫಲ? ನಿಜಕ್ಕೂ ಅದರಿಂದ ತನ್ನ ಆನಂದವೂ, ಆತ್ಮವೂ—ಎರಡೂ ನಾಶವಾಗದಿರವು. ಅದೇ ಇಂದು ಸಾವಿರಾರು ಜನರ ಹವ್ಯಾಸವಾಗಿದೆ.

ಇಂಥ ಮನಸ್ಸುಗಳು, ಪ್ರತಿಯೊಂದು ಸಂದರ್ಭವನ್ನು ಲಾಭಕ್ಕಾಗಿ ಉಪಯೋಗಿಸುವ ಯಂತ್ರಗಳು. ಅಂಥ ಮನಸ್ಸುಗಳಲ್ಲಿ ತಾನೇ ಅಧಿಕ, ತಾನೇ ಶ್ರೇಷ್ಠನೆಂಬ ಭಾವನೆಯು ತುಂಬಿ ತುಳುಕುವುದು. ಅಂಥ ಸ್ತ್ರೀ ಪುರುಷರ ಪಾಲಿಗೆ, ಈ ಜಗತ್ತೆಲ್ಲ ತಮ್ಮ ವ್ಯಾಪಾರಕ್ಕಾಗಿ ನಿರ್ಮಿತವಾಗಿದೆಯೆಂದೇ ತೋರುವುದು. ಅಂಥ ಸ್ತ್ರೀಯರ ಮನಸ್ಸೂ, ಶರೀರವೂ ನಿಜವಾದ ಆನಂದವೇನೆಂದೇ ಸವಿಯದೆ; ಯಾವ ಜೀವವೂ ಹಾಳಾಗಿ ಹೋಗುವುದು.

ಅಂಥ ನಾರಿಯೊಬ್ಬಳು, ಪುರುಷನೊಬ್ಬನ ಸಂಗಡ ವ್ಯವಹರಿಸುವುದರಿಂದೇನು ಲಾಭ? ಅವಳ ಸ್ತ್ರೀ ಶರೀರವು ಬರೀ ಒಂದು ವ್ಯಾಪಾರದ ಸಾಮಗ್ರಿ. ಅವಳ ಮನಸ್ಸಿನಲ್ಲಿ ಪರರ ಮನಸ್ಸಿನ ಮೇಲೆ ಈಗಾಗಲೇ ಯಜಮಾನಿಕೆ ಉಂಟಾಗಿದೆ. ಪರರ ವಸ್ತುಗಳನ್ನು ತಮ್ಮದನ್ನಾಗಿ ಮಾಡಿಕೊಳ್ಳುವ ಪುರುಷರು ಅವಳ ಪಾಶಕ್ಕೆ ಬೀಳಬಹುದು. ಅವಳಂತಿರುವ ಭ್ರಾಮಕರು ಅವಳನ್ನು ಸೇರಬಹುದು. ಅಂಥವರ

(೧೨ನೇ ಪುಟವನ್ನು ನೋಡುವುದು.)



# ಸ್ವಾಮಿ ವಿವೇಕಾನಂದರು.

Where should you go to seek for God,—are not all the poor, the miserable, the weak, Gods? Why not worship them first? Why go to dig a well on the shores of the Ganges?



ಸ್ವಾಮಿ ವಿವೇಕಾನಂದರು ಶ್ರೀ ರಾಮಕೃಷ್ಣ ಪರಮಹಂಸರ ಆದರ್ಶ ಶಿಷ್ಯರಾದರು. ಶಾಸ್ತ್ರೋಪನಿಷತ್ತುಗಳಲ್ಲಿ ಸ್ವಾಮಿಯವರು ನೈಪುಣ್ಯವನ್ನು ಸಂಪಾದಿಸಿದರು. ಬಾರಂಗೋರ್ ಎಂಬಲ್ಲಿ ಸನ್ಯಾಸಾಶ್ರಮವನ್ನು ಸ್ಥಾಪಿಸಿ ಬಹು ಮಂದಿ ಶಿಷ್ಯವರ್ಗದೊಡನೆ ಹಿಂದೂಮತದ ಜೀವ ಜೀವಾಳವಾದ ಆಧ್ಯಾತ್ಮಿಕವಿಚಾರ ಜಲಧಿಯಲ್ಲಿ ಈಜಲು ಪ್ರಾರಂಭಿಸಿದರು.

ಒಂದು ದಿನ ಸ್ವಾಮಿಯವರಿಗೆ ದೇಶಾಟನಕ್ಕೆ ಹೊರಡಬೇಕೆಂಬ ಇಚ್ಛೆಯುಂಟಾಯಿತು. ಕೆಲವು ದಿನಗಳಲ್ಲೇ ಹೊರಟರು—ಮಾದೇವನ ಮೇಲೆ ಸರ್ವ ಭಾರವನ್ನಿಟ್ಟು ಹೊರಟರು. ಮೊದಲು ಬೆನಾರಸ್‌ಗೆ ಹೋದರು. ಅಲ್ಲಿ ಅನೇಕಾನೇಕ ಪಂಡಿತರನ್ನೂ, ಸನ್ಯಾಸಿಗಳನ್ನೂ ಸಂದರ್ಶಿಸಿ ತನ್ನ ತಾರುಣ್ಯ ಜ್ಞಾನ ಕಿರಣದಿಂದ ಕಣ್ಣುಕುಕ್ಕುವಂತೆ ಮಾಡಿದರು. ಕಾಶಿಯಿಂದ ಹಿಮಾಲಯ ಪ್ರದೇಶಗಳಿಗೆ ನಡೆದರು. ಅಲ್ಲಿಂದ ಆಲ್ವಾರ್ ಸಂಸ್ಥಾನಕ್ಕೆ ಹೋಗಿ ಒಂದು ಧರ್ಮಶಾಲೆಯಲ್ಲಿದ್ದರು. ತೇಜಃಪುಂಜನಾದ ಸ್ವಾಮಿಯು ಬಂದಿಳಿದ ವಾರ್ತೆಯು ಆಗಿನ ಮಹಾರಾಜ ಮಂಗಳ ಸಿಂಹರಿಗೆ ತಲಪಿತು. ಆಂಗ್ಲ ಕ್ರಮನಿಯಮಗಳನ್ನು ತನ್ನ ಜೀವನಾಧಾರವಾಗಿಟ್ಟುಕೊಂಡಿದ್ದ ಮಹಾರಾಜರು ಸ್ವಾಮಿಗಳವರನ್ನು ಕರತರಿಸಿ "ಸಕಲ ಶಾಸ್ತ್ರವಿಶಾರದರಾದ ನೀವು ಹೀಗೆ ಬೇಡುವುದೇಕೆ? ಎಲ್ಲಾದರೂ ಸಂಬಳಕ್ಕೆ ನಿಲ್ಲಬಾರದೇ?" ಎಂದು ಬೋಧಿಸಿದರು. ಕೂಡಲೆ ಸ್ವಾಮಿಯವರು "ತಾವು ಪಾಶ್ಚಾತ್ಯ ಜೀವನ ಕ್ರಮಕ್ಕೆ ಕಟ್ಟುಬಿದ್ದಿರುವುದೇಕೆ? ಸಂಸ್ಥಾನದ ಪ್ರಜೆಗಳನ್ನು ಮರೆತು ವರ್ತಿಸುವುದೇಕೆ?" ಎಂದು ಪ್ರಶ್ನೆಯಿಟ್ಟರು. ಇದಕ್ಕುತ್ತರವಾಗಿ ಮಹಾರಾಜರು "ಏಕೆಂದು ತಿಳಿಯೆ, ಹಾಗು, ಇದರಲ್ಲಿ ನನಗೆ ಮೆಚ್ಚಿಗೆ ಇದೆ" ಎಂದರು. ಸ್ವಾಮಿಯವರು ತಟ್ಟನೆ, "ಹಾಗೋ! ನನಗೆ ಈ ಫಕೀರತನದಲ್ಲೂ ಮೆಚ್ಚಿಗೆ ಇರುವುದರಿಂದ ನಾನು ಹೀಗೆ ಭಿಕ್ಷಾಟನಕ್ಕೆ ಹೊರಟಿರುವೆನು" ಎಂದು ಧೈರ್ಯವಾಗಿ ಹೇಳಿಬಿಟ್ಟರು.

ಸ್ವಾಮಿಯವರು ಆಬು ಪರ್ವತ, ಗುಜರಾಥ, ಮುಂಬಾಯಿ, ಪೂನಾಗಳನ್ನು ಕಂಡು ಅನೇಕ ಸದ್ಗೃಹಸ್ಥರನ್ನು ಸಂದರ್ಶಿಸಿದರು. ಪೂನೆಯಲ್ಲಿ ಸ್ವಾಮಿಯವರು ಲೋಕಮಾನ್ಯ



ಸ್ವಾಮಿ ವಿವೇಕಾನಂದರು.

ಬಾಲಗಂಗಾಧರ ತಿಲಕರನ್ನೂ ಭೇಟಿಯಾಗಿ ಅವರ ಆತ್ಮನನ್ನು ಒಲಿಸಿಕೊಂಡರು. ಹತ್ತು ದಿನಗಳ ತನಕ ಅವರ ಅತಿಥಿಯಾಗಿ ತಂಗಿದರು. ವಿವೇಕಾನಂದರು ಬೆಳಗಾಂವಿ, ಬೆಂಗಳೂರು ಮೊದಲಾದ ಪ್ರಾಂತ್ಯಗಳಿಗೆ ಹೋದರು. ಮೈಸೂರು ಮಹಾರಾಜರು ವಿವೇಕಾನಂದರನ್ನು ಕಂಡು ಅತ್ಯಾನಂದಭರಿತರಾದರು. ಸ್ವಾಮಿಯವರು ಅಮೇರಿಕಾ ಮೊದಲಾದ ಪಾಶ್ಚಾತ್ಯ ದೇಶಗಳಿಗೆ ಸಂಚರಿಸಬೇಕೆಂದು ಸೂಚಿಸಿದುದನ್ನು ಕೇಳಿ ಮಹಾರಾಜರು ಔದಾರ್ಯದಿಂದ ಸ್ವಾಮಿಯವರ ಸಂಚಾರ ವೆಚ್ಚವನ್ನು ವಹಿಸಿಕೊಳ್ಳುವೆನೆಂದರು. ಆದರೆ ವಿವೇಕಾನಂದರು ಅದನ್ನು ಸ್ವೀಕರಿಸಲೊಪ್ಪಲಿಲ್ಲ.

ಸ್ವಾಮಿಯವರು ಕನ್ಯಾಕುಮಾರಿಯಲ್ಲಿ ಧ್ಯಾನನಿರತರಾಗಿದ್ದಾಗ ಅವರಿಗೆ ಬಡವರ ದುರ್ದಶೆಯನ್ನು ಹೋಗಲಾಡಿಸಬೇಕೆಂಬ ಆತ್ಮ ಪ್ರೇರೇಪಣೆಯಾಯಿತು. ಅವರು ದಿನೇ ದಿನೇ ದರಿದ್ರ ನಾರಾಯಣರ ಉನ್ನತಿಮಾರ್ಗವನ್ನು ಚಿಂತಿಸಿದರು. ಅಧಿಕಾರ ವರ್ಗದವರನ್ನು ಒಲಿಸಿಕೊಂಡು ಸಾಮಾನ್ಯ ಜನರ ಜೀವನ ಪ್ರಗತಿಯನ್ನುಂಟುಮಾಡಬಹುದೆಂದು ಬಗೆದರು. ಸನಾತನ ಧರ್ಮಪ್ರಚಾರವನ್ನು ಪಾಶ್ಚಿಮಾತ್ಯರಿಗೆ ಮಾಡಿ ಆಧ್ಯಾತ್ಮಿಕ ಪ್ರಭೆಯನ್ನು ಹರಡಿಸಬೇಕೆಂದು ಸಂಕಲ್ಪಿಸಿದರು.

೧೮೯೩ನೇ ಇಸವಿ ಮೆ ೩೧ನೇ ತಾರೀಕು ವಿವೇಕಾನಂದರ ಆಶಯವು ನೆರವೇರಿತು. ಅಮೇರಿಕಕ್ಕೆ ಸ್ಟೀಮರು ಹತ್ತಿದರು. ಚಿಕಾಗೋ ನಗರದಲ್ಲಿ ಮಿಂಚಿನ ವೇಗದಿಂದ ಕೀರ್ತಿಯುತರಾದರು. ಅವರ ಮಂಜುಳ ಮತ್ತು ಗಂಭೀರ ಭಾಷಣವನ್ನು ಕೇಳಲು ಸಾವಿರಗಟ್ಟಳೆ ಜನರು ಬಂದರು. ರಾಮಕೃಷ್ಣ ಪರಮಹಂಸರ ಸಂದೇಶ ಪ್ರಚಾರಾರ್ಥವಾಗಿ ಅನೇಕ ಸಂಸ್ಥೆಗಳು ಸ್ಥಾಪಿಸಲ್ಪಟ್ಟುವು. ಪರಮ ಹಂಸರ ಜೀವನಾದರ್ಶವನ್ನು ಅರಿತ ಅಮೇರಿಕನರು ಬೆರಗಾಗಿ ಅವರ ಧರ್ಮದಲ್ಲಿ ಅನೇಕರು ದೀಕ್ಷಾಬದ್ಧರಾದರು. ಸಾವಿರಾರು ಪತ್ರಿಕೆಗಳು ದಿನ ದಿನವೆಂಬಂತೆ ಸ್ವಾಮಿಯವರ ಮತವನ್ನೇ ಪ್ರಚುರಗೊಳಿಸಿದುವು. ಬೋಸ್ಟನ್ ಪಟ್ಟಣದಲ್ಲಿನ ಲೇಡಿಸ್ ಕ್ಲಬ್ ಮೊದಲಾದ ಕಡೆಗಳಲ್ಲಿಯೂ ಭಾಷಣವಿತ್ತರು. ಬಂಗಾಳಿ ಪೇಟಾವನ್ನು ಧರಿಸಿ, ನಿಲುವಂಗಿಯನ್ನು ಹಾಕಿಕೊಂಡು ರಣಧೀರ ಪ್ರತಾಪಯುಕ್ತವಾಗಿ ನುಡಿಯುವ ಸ್ವಾಮಿಯವರ ಗಂಭೀರ ಭಾಷಣವು ಸರ್ವರ ಹೃದಯ ಮಂದಿರದಲ್ಲುಳಿಯಿತು.

ಮ. ಜಾ.

## ಬಡವನ ಮೊರೆ!

(ಲೇ.—ಶ್ರೀ. ಕೆ. ಈಶ್ವರ, ನೀರೇಶ್ವಾಲ್ಯ ಮಂಗಳೂರು)

ನಾನು ಬಡವ! ತಿರುಕನೆಂದು, ನಿನ್ನ ಮುಂದೆಯೆ!
ಸಾನುರಾಗದಿಂದಲೆನ್ನ ಕಾಯೊ ತಂದೆಯೆ!
ನಾನು ಇಂದು ಸುಖವನರಿಯೆ,
ನಾನು ಮುಂದು ಪಥವ ತಿಳಿಯೆ,
ನೀನು ಎನ್ನ ನೂಕಬೇಡ! ಪಾಪ ಪಂಕಕೆ;
ನಾನು ಪಾಪವರಿಯೆ ದೇವ ಹಾಕು ಧರ್ಮಕೆ.

ಹಣವು ಇರದ ಹೆಣವು ಎಂದು ಎನ್ನ ಹಳಿವರು
ಗುಣದ ಗರಿಮೆಯರಿಯದವರು ಎನ್ನ ಜರೆವರು
ಧನಿಕರೆನ್ನ ನೋಡಿ ನಗುತ
ಅಣಕಿಸುವರು; ಎದೆಯು ಕುದಿತ,
ಮನದ ದುಗುಡ, ಜನರ ನಿಂದೆ ಸಹಿಸಲಾರೆನು!
ಎನಿತೊ ತಾಪ ಸಹಿಸಲಾಪ ತೀರ ಬಡವನು!

ಕಾಯಕಷ್ಟ ಮಾಡಲೀಗ ಬಲವು ಇಲ್ಲವು!
ಆಯುವೆಲ್ಲ ಹೊಟ್ಟೆಗಾಗಿ ಆರಿ ಹೋದುವು!
ಈಯುರಾರು ಭಿಕ್ಷೆಯನ್ನು!
ನಾಯಿಗಿಂತ ಕಡೆಯು ನಾನು!
ಬೇಯುತಿರುವ ಒಡಲ ತಣಿಯಲಾರು?
ಕಾಯುವವರು ನಿನ್ನ ಬಿಟ್ಟರಾರು ಇರುವರು?

## ಭಕ್ತನ ಬಯಕೆ.

(ಭಾ. ಷ.)

ಸಿರಿರಮಣ! ಮುಂಜಾನೆಯಲಿ ನಾ ।
ತ್ವರದಿ ನಿದ್ರೆಯು ತೊರೆದು, ನಿನ್ನಯ ।
ಚರಣ ನೆನೆಯುವ ಸನ್ಮನವ ಕರುಣಿಸೆನಗನವರತ; ॥
ಪರಮ ಪುರುಷನೆ! ಮತ್ತೆನಗೆ ಕೊಡು, ।
ಗುರುಹಿರಿಯರಡಿದಾವರೆಗಳಿಗೆ ।
ಎರಗುತಾಜ್ಞಾಪನೆಗಳನು ನಡೆಯಿಸುವ ಸುಮ್ಮನವ ॥ ೧ ॥

ನಿತ್ಯವೆನ್ನಯ ಮನದಿ ನೀ ನೆಲ—।
ಸುತ್ತ, ಕಿತ್ತೆನ್ನಯ ಕುಗುಣಗಳ, ।
ಸತ್ಯವನ್ನಿರಿಸುತ್ತಮನೆನಿಸು, ಕೆಚ್ಚೆದೆಯ ಬರಿಸು, ।
ಮತ್ತು ಬೇಡುವೆ! ದೇಶಭಾಷೆಯ ।
ಭಕ್ತಿಭಾವದಿ ಸೇವಿಸುವ ಮನ—।
ವಿತ್ತು, '**ಬಡವರಬಂಧು**' '**ದೇಶದಬಂಧು**'ವೆನಿಸೆನ್ನ ॥ ೨ ॥

**ಎಚ್. ರಂಗರಾಯ,** ಮಾದರಬೆಟ್ಟು.

## ಅಂತ್ಯ ನಿಜವು.

ರವೀಂದ್ರನಾಥ ಠಾಕೂರರ 'I know my days will end I know'
ಎಂಬ ಪದ್ಯದ ಆಧಾರದಿಂದ
**ವಾರ್ಧಿಕ ಷಟ್ಪದಿ.**

ಆನರಿವೆನೊಂದು ದಿನವೆನ್ನಂತ್ಯ ಬರುವುದೆಂ—।
ದಾನರಿವೆನಾ ದಿನದಿ ಥಳಥಳಿಪ ದಿನಪನುಂ ।
ಬಾನದಿಂ ಮೊಗ ನೋಡಿ, ದಯೆ, ಚಿಂತೆ, ಕಡೆನೋಟದಿಂ ಹರಸಿ ನಗುವನೆಂದು ॥
ವೇಣುವಿನ ಗಾನ ತಾನಿರಬಹುದು, ತುರುಕರುಗ ।
ಳಾ ನದಿಯ ತೀರದಲಿ ಮೇಯುತ್ತ, ಹುಡುಗರಾ
ದಿನದಲ್ಲಿಯಾಡುತ್ತ, ಪಕ್ಷಿಗಳು ಹಾಡುತ್ತಲಿರಬಹುದು— ಅಂತ್ಯ ನಿಜವೂ ॥ ೧ ॥
ನಾ ಪೋಪ ಮೊದಲು ಹೇಳೆಂದು ಪ್ರಾರ್ಥಿಪೆ ನಿನಗೆ ।
ಈ ಪ್ರಥಿವಿ ಗಗನವನು ದೃಷ್ಟಿಸುವ ಕಣ್ಣಿನಲಿ ।
ಈ ಪಥಕೆ ಏಕೆನ್ನ ಎಳೆದಳೋ? ಏತಕ್ಕೆ ಶಾಂತ ನಿಶಿ ತಾರೆಗಳ ಭಾಷೆಯಿಂದ ॥
ಆ ಪರಿಯೊಳೆನ್ನೊಡನೆ ನುಡಿದಳೋ? ಏತಕ್ಕೆ ।
ರೂಪಮಯ ಹಗಲಿನಾ ಬೆಳಕೆನ್ನ ಒಡಲೊಳಗೆ ।
ತಾಪಮಯ, ದೀಪಮಯ ತೋಷಾತರಂಗಗಳ ಕಳುಹಿದಳೊ ಹೇಳು ನನಗೆ ॥ ೨ ॥
ಧರೆಯೊಳಗಿನೆನ್ನ ಸಂಚಾರವದು ಕೊನೆಗಾಂಬ ।
ದರೊಳಗುಸುರೆನ್ನ ಪದ್ಯವು ತಾನು ಮುಗಿಯುವುದೊ ।
ಹಿರಿದೆನಿಪ ಅದೃಷ್ಟಪಹರೆಯಲಿ, ಮತ್ತಾನು ತುಂಬುವೆನೊ ಋತು ಸಕಲದಾ ॥
ಪರಿಪರಿಯ ಹಣ್ಣು ಹೂಗಳನೆನ್ನ ಬುಟ್ಟಿಯಲಿ; ।
ಅರುಹಾನು ಕಾಣಲಾಪೆನೆಯೆನ್ನ ಜೀವನ ಸೊ ।
ಡರಿನಾ ಬೆಳಕಿನಿಂದ **ಈಶ್ವರಿಯೆ** ನಿನ್ನ ಮೊಗ?—ಕಂಠಕ್ಕೆ ಮಾಲೆಯಿಡಲೂ ॥

**ಮ. ಜಾ.**

## ವಿಮರ್ಶೆ.

**"ಸುಬೋಧ"** ಬೆಂಗಳೂರು. ಸಂಪಾದಕರು ಶ್ರೀ. ಎಂ. ರಾಮರಾವ್. ವಾ. ಚಂದಾ ರೂ ೩.

ಕರ್ಣಾಟಕ ರಂಗದಲ್ಲಿ 'ಜಯಕರ್ನಾಟಕ'ದ ನಂತರ ಬೆಂಗಳೂರಿನ ಸುಬೋಧವೇ ಅತ್ಯಮೂಲ್ಯ ಮಾಸಿಕ ಪತ್ರಿಕೆ. ಕಳೆದ ೭ ವರ್ಷಗಳಿಂದಲೂ ಅವಿಶ್ರಾಂತ ಸೇವೆಯನ್ನೇ ಸಗಿದೆ. ೭ನೇ ವರ್ಷವು ದಾಟಿ, ೮ನೇ ವರ್ಷಾರಂಭಕ್ಕೆ ಕಾಲಿಟ್ಟಿದೆ. ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯನ್ನು ಇದೇ ಪ್ರಕಟನಾಲಯವು ಪ್ರಕಟಿಸುತ್ತಾ ಇದೆ. "ನಗುವ ನಂದ" ಎಂಬ ಮಾಸಿಕ ಪತ್ರಿಕೆಯನ್ನು ಹೊರಡಿಸಿದ್ದಾರೆ. ಸುಬೋಧದಲ್ಲಿ ಮಾಸಂಪ್ರತಿ ಕಲಾ ಮೊದಲಾದ ವಿಷಯಕವಾದ ಚಿತ್ರಗಳು ಬರುತ್ತವೆ. ಭಗವನ್ನಾಯಾಮೃತ, ಕಥೆ, ಅರವಿಂದ ಘೋಸರ ಗೀತೆಯ ಭೂಮಿಕೆ; ಸಾಹಿತ್ಯ ಸಾಮ್ರಾಜ್ಯ ನಮ್ಮ ನುಡಿಗನ್ನಡಿ ಐತಿಹಾಸಿಕ ಲೇಖನ, ಕವನ ಮೊದಲಾದ ಅನೇಕಾನೇಕ ಅಮೂಲ್ಯ ವಿಷಯಗಳು ಪ್ರಕಟವಾಗುತ್ತವೆ. ಸಂಪಾದಕರ ಸಾಹಸವು ಅಭಿನಂದನೀಯವಿದೆ. ಇವರ ಸುಬೋಧವು ಶ್ರೀದೇವರ ದಯೆಯಿಂದ ಚಿರಕಾಲ ಬಾಳಿ, ಕನ್ನಡ ನುಡಿಯ ಸೇವೆಯನ್ನು ನಿರಂತರ ಮಾಡಲೆಂದು ಹಾರೈಕೆ.



# ಪಂಡಿತ ಮದನಮೋಹನ ಮಾಲವೀಯರು.





ಪಂಡಿತ ಮದನಮೋಹನ ಮಾಲವೀಯರೆಂದರೆ ಶುದ್ಧ ಶ್ರದ್ಧಾಳು. ಶಾಸ್ತ್ರಾಗಮಗಳನ್ನು ಸಂಪ್ರದಾಯ ಶರಣರಾಗಿ ಅನುಸರಿಸುವ ಆಂಗ್ಲ ವಿದ್ಯಾ ಸಂಪನ್ನ ಹಿಂದೂಗಳಲ್ಲಿ ಪಂಡಿತರು ಪ್ರಥಮದವರು. ಒಬ್ಬನ ಇದಿರಲ್ಲಿ ಊಟ ಮಾಡಲು ಅಸಮ್ಮತಿಸುವ ಸೂತ್ರಪಾಲಕರು ಅವರೆಂದರೆ, ಅವರ ಸಂಪ್ರದಾಯಾನುಸರಣೆಯು ಎಷ್ಟಕ್ಕಿರಬಹುದೆಂದು ಊಹಿಸಬಹುದು. ಆದರೆ ರಾಷ್ಟ್ರೀಯ ಹಿತವು ಕೈಗೂಡುವಲ್ಲಿ ಪಂಡಿತರು ಅಂತಹ ಶ್ರದ್ಧೆ ಸಂಪ್ರದಾಯಗಳನ್ನು ದೂರವಿರಿಸಿಬಿಡುವರು. ಅವರಂತಹ ಶ್ರದ್ಧಾಳುವು ರೌಂಡ್ ಟೇಬಲ್ ಪರಿಷತ್ತಿನ ಸಲುವಾಗಿ ಇಂಗ್ಲೆಂಡಿಗೆ ಹೋಗಲು ಒಪ್ಪಿದುದು ನಿಜವಾಗಿಯೂ ಒಂದು ವಿಶೇಷ ಸಂಗತಿಯೇ!

ಸನಾತನ ಧರ್ಮದಲ್ಲಿ ಪಂಡಿತರು ಅನಿರ್ವಚನೀಯ ವಿಶ್ವಾಸವುಳ್ಳವರು. ವೇದ, ಶಾಸ್ತ್ರ, ಆಗಮ ಪುರಾಣಾದಿಗಳಲ್ಲಿ ಅವರಿಗಿರುವ ನಂಬಿಕೆಯು ವರ್ಣನಾತೀತ. ಆದರೆ ರಾಷ್ಟ್ರಹಿತವುಂಟಾಗುತ್ತದೆಂದು ತಿಳಿದೊಡನೆ ಅವರು ಅಂತಹ ಅಂಧಶ್ರದ್ಧೆಯನ್ನು ಮರೆಯಲು ಸಿದ್ಧರು. ಹರಿಜನೋದ್ಧಾರ ಕಾರ್ಯಕಲಾಪಗಳಲ್ಲಿ ಅವರು ಎಷ್ಟು ಶ್ರದ್ಧೆಯಿಂದ ಭಾಗವಹಿಸಿಕೊಂಡಿರುವರೆಂಬುದು ಅವರು ಮೊನ್ನೆ ಬೆನಾರಸ್‌ನಲ್ಲಿ ಕರೆದ ಸನಾತನ ಧರ್ಮೀಯರ ಮಹಾಸಭೆಯಲ್ಲಿ ಇತ್ತ ಉದ್ಧಾಮ ಭಾಷಣದಿಂದ ವ್ಯಕ್ತವಾಗುತ್ತದೆ. ಮಾಲವೀಯರ ಮತದಂತೆ—ಹಿಂದೂತ್ವವು ಸಣ್ಣ ಸುತ್ತಿನದ್ದಲ್ಲ. ಅದು ವಿಶಾಲವಾದುದು. ಹಿಂದೂಮತವೆಂದರೆ ಬೇಲಿ ಹಾಕಲ್ಪಟ್ಟ ಸೆರೆಮನೆಯಂತಲ್ಲ. ಅದು ವಿಸ್ತಾರವಾದ ಧರ್ಮದ ಲೋಕ.

ಶಾಂತಿಸ್ಥಾಪಕರಲ್ಲಿ ಮಾಲವೀಯರು ಅಗ್ರಗಣ್ಯರು. ಎಲ್ಲಿ ಉರಿಯುವ ಕ್ಷೋಭೆಯಿದೆಯೋ, ಅಲ್ಲಿ ಮಾಲವೀಯರ ಶಾಂತ ಹಸ್ತವಿದೆ. ಎಲ್ಲಿ ಭಿನ್ನಾಭಿಪ್ರಾಯದ ಒಡಕು ಮೂಡಿತೋ, ಅಲ್ಲಿ ಮಾಲವೀಯರ ಪತ್ತೆಯಿಡುವ ಕೈಯಿದೆ. ಎಲ್ಲಿ ರಾಷ್ಟ್ರವಾಗಲೀ, ಸರಕಾರವಾಗಲೀ ತಪ್ಪುದಾರಿಯನ್ನು ಹಿಡಿಯಿತೋ, ಅಲ್ಲಿ ಸ್ನೇಹಪರ ಮಾರ್ಗದರ್ಶನವಿದೆ. ಅದರಿಂದಾಗಿಯೇ ಇಂಡಿಯಾ ಮತ್ತು ಬ್ರಿಟಿಷ ಸರಕಾರಗಳು ಇಂದು ಅವರ ನಡೆನುಡಿಗಳನ್ನು ಮಾನಿಸುತ್ತಿವೆ. ಯಾರು ಕ್ರಾಂತಿಯುತ್ಪಾದಕರೆಂದಿದ್ದರೂ, ಮಾಲವೀಯರು ಶಾಂತಿದಾಯಕರೆಂದು ಇಡೀ ಪ್ರಪಂಚವೇ ತಿಳಿದಿದೆ.

ನಾನ್ನೂರು ವರ್ಷಗಳ ಹಿಂದೆ ಮಾಲವೀಯರ ಹಿರಿಯರು ಮಾಲ್ವದಿಂದ ಅಲ್ಲಹಾಬಾದಿಗೆ ಬಂದರು; ಅವರ ಸಂತಾನದಲ್ಲಿ ಪ್ರತಿಯೊಬ್ಬರೂ ಮಹಾ ಪಂಡಿತರು, ಪ್ರತಿಯೊಬ್ಬರೂ ಶುದ್ಧ ಹಿಂದೂ ಮತಾನುಯಾಯಿಗಳು; ಮಾಲವೀಯರ ಪಿತೃಗಳಾದ ಪಂಡಿತ ಬ್ರಾಜ್‌ನಾಥರು ಆ ಕಾಲದ ವಿದ್ವಾಂಸರಲ್ಲಿ ಅದ್ವಿತೀಯರು. ಸಂಸ್ಕೃತದಲ್ಲಿ ಮಾಲವೀಯರ ತಂದೆಯವರು ಮಹಾ ನೈಪುಣ್ಯವನ್ನು ಪಡೆದವರಿದ್ದರು.

ಮಾಲವೀಯರು ಬ್ರಾಜ್‌ನಾಥರ ತೃತೀಯ ಪುತ್ರರು. ಇವರು ೧೮೬೧ನೇ ಇಸವಿ ದಶಂಬರ ೨೫ನೇ ದಿನ ಅಲ್ಲಹಾಬಾದಿನಲ್ಲಿ ಜನಿಸಿದರು. ಇವರು ಮಾತಿನಲ್ಲಿ ಖಂಡಿತವಾದಿಗಳು. ಆತ್ಮಸಾಕ್ಷಿ ಪ್ರಕಾರ ನಡೆಯುವವರು. ಶಕುನ, ಮುಹೂರ್ತಗಳಲ್ಲಿ ಇವರಿಗೆ ಅತ್ಯಂತ ಭರವಸೆ; ಎಷ್ಟರ ವರೆಗೆಂದರೆ— ತನ್ನ ಜನನವಾದ ಅದೊಂದು ಹಳ್ಳಿಯ



ಪಂಡಿತ ಮದನಮೋಹನ ಮಾಲವೀಯರು.

ಮನೆಯನ್ನು ಬಿಟ್ಟು ಇನ್ನಿತರ ಉತ್ತಮ ವಾಸಸ್ಥಾನವನ್ನು ಆರಿಸಬೇಕೆಂದು ಯಾರ್‍ಯಾರು ಹೇಗೆ ಹೇಳಿದರೂ ಅವರು ಇಷ್ಟರ ತನಕವೂ ಒಪ್ಪಲಿಲ್ಲ.

ಕಲ್ಕತ್ತ ವಿಶ್ವವಿದ್ಯಾಲಯದಲ್ಲಿ ೧೮೭೯—೧೮೮೧ರಲ್ಲಿ ಅವರ ಎಫ್. ಎ. ಬಿ. ಎ. ವಿದ್ಯಾರ್ಜನೆಯು ಮುಗಿಯಿತು. ಎಲ್. ಎಲ್. ಬಿ.ಗೆ ಸೇರಿದರು. ತದನಂತರ ಎಮ್. ಎ.ಗೆ ಕೈಕೊಟ್ಟರು. ಆರ್ಥಿಕ ತೊಂದರೆಗಳಿಂದಾಗಿ ಮಾಲವೀಯರು ೫೦ರಿಂದ ೭೫ ರೂ. ಸಂಬಳ ಸಿಗುವ ಒಂದು ಉಪಾಧ್ಯಾಯ ವೃತ್ತಿಯನ್ನು ಅಲ್ಲಹಾಬಾದಿನ ಗವರ್ನಮೆಂಟ್ ಹೈಸ್ಕೂಲಿನಲ್ಲಿ ನೋಡಿದರು; ಕೆಲವು ಸಮಯ ದಾಟುತ್ತಲೇ, ಕಾಲಕಂಕರದ ರಾಜಾ ರಾಮಪಾಲ ಸಿಂಗರೆಂಬವರ ಸಹಾಯದಿಂದ ರೂ. ೨೦೦ರ ಮೇಲೆ 'ಹಿಂದೂಸ್ಥಾನ' ಎಂಬ ವಾರ್ತಾ ಪತ್ರಿಕೆಯ ಸಂಪಾದಕತ್ವವನ್ನು ವಹಿಸಿಕೊಂಡರು.

ಎರಡೂವರೆ ವರ್ಷಗಳ ತನಕ ಪ್ರಾಶಸ್ತ್ಯ ಸೇವೆಯಾದ ನಂತರ 'ಇಂಡಿಯನ್ ಯೂನಿಯನ್'ನಲ್ಲಿ, ಆ ಮೇಲೆ 'ಅಭ್ಯುದಯ' ವಾರ್ತಾ ಪತ್ರಿಕೆಗಳಲ್ಲಿಯೂ ಅವರ ಸೇವೆಯು ನಡೆಯಿತು. 'ಲೀಡರ್' ದೈನಿಕ ಪತ್ರಿಕೆಯು ಇಂದು ಜಯಶೀಲವಾಗಿರುವುದಾದರೆ ಅದು ಪಂಡಿತರ ಸಾಹಸದಿಂದಲೇ.

ಸಾರ್ವಜನಿಕ ಕಾರ್ಯಾಸಕ್ತಿಯು ಅವರ ಆಜನ್ಮಗುಣ. ವಿದ್ಯೆ ಮತ್ತು ಸೇವೆಯು ಅವರ ಹಂಬಲ. ೧೮೮೬ರಲ್ಲಿ ಅವರು ಅಖಿಲ ಭಾರತ ಕೊಂಗ್ರೆಸ್ಸು ಮಹಾಸಭೆಯೊಡನೆ ಕೈಜೋಡಿಸಿಕೊಂಡರು. ತನ್ನ ಎಳೆಯ ಪ್ರಾಯದಿಂದಲೇ ಅವರು ಉಪನ್ಯಾಸದ ಕಲೆಯನ್ನು ಕಲಿತುಕೊಂಡರು. ವಕಾಲತಿನಲ್ಲಿ ಚೆಂಡು ಕಾಲಡಿಯಲ್ಲಿದ್ದರೂ ಅವರದನ್ನು ಒದೆಯಲಾರದಾದರು. ಕಾಲಾಕ್ರಮೇಣ ಮಾಲವೀಯರು ಕೊಂಗ್ರೆಸ್ಸಿನ ಸೆರಗಿನಲ್ಲೇ ಆಶ್ರಿತರಾದರು. ಅದರ ಶ್ರೇಯಸ್ಸಿಗಾಗಿ ತನುಮನಧನಗಳನ್ನರ್ಪಿಸಿದರು.

ಈಗ ಮಾಲವೀಯರ ಹೆಸರು ಸರ್ವವ್ಯಾಪಿಯಾಯಿತು. ೧೯೧೦ರಲ್ಲು ವೈಸರಾಯರ ಲೆಜಿಸ್ಲೇಟಿವ್ ಸಭೆಗೆ ಚುನಾಯಿಸಲ್ಪಟ್ಟರು.

ಬೆನಾರೆಸ್‌ನ 'ಹಿಂದೂ ಯುನಿವರ್ಸಿಟಿ'ಯು ವಿಶ್ವಪ್ರಖ್ಯಾತವಾಗಿ ಇಂದಿಗೆ ಮೆರೆಯುವುದಾದರೆ, ಅದರ ಸ್ಥಾಪನಾಚಾರ್ಯರಾದ ಪಂಡಿತ ಮಾಲವೀಯರ ಸಾಹಸಪೂರ್ವಕ ನಿಧಿಶೇಖರಿಸುವಿಕೆಯಿಂದಾಗಿಯೇ. ಅವರು ಬೇಡುವುದರಲ್ಲಿ ರಾಜಕುಮಾರ! ಒಂದು ಲಕ್ಷ ರೂಪಾಯಿಯು ಈ ಹೊತ್ತು ಬೇಕೆಂದಾದರೆ, ನಾಳೆ ಎಲ್ಲಾ ಶ್ರೀಮಂತರನ್ನು ಸಂದರ್ಶಿಸಿ, ಅದನ್ನು ಒದಗಿಸಿಕೊಳ್ಳುವರು. ಅವರ ಬೇಡಿಕೆಯು ಎಂತಹ ಲೋಭಿಯನ್ನೂ ಕರಗಿಸಿಬಿಡುತ್ತದೆ.

ಹಿಂದೂ ಮಹಾ ಸಭೆ, ಸ್ವದೇಶಿ ಪ್ರಚಾರಕ ಸಭೆಗಳಲ್ಲಿ ಮಾಲವೀಯರು ಗೈದ ಸಾಹಸವು ಅಪ್ರತಿಹತವಾಗಿದೆ. ಹಿಂದೂ ವರ್ಗದವರ ಒಗ್ಗಟ್ಟೇ ಹಿಂದೂಸ್ಥಾನದ ಏಳ್ಗೆಯೆಂದು ಅವರ ಭಾವನೆ. ಅಲ್ಲದೆ ಸ್ವದೇಶೀಯಲ್ಲಿ ಅವರಿಗೆ ಅತ್ಯಂತ ಪ್ರೇಮ. ಸಂಯುಕ್ತ ಪ್ರಾಂತ್ಯದ ಅನೇಕಾನೇಕ ಸಂಸ್ಥೆಗಳು ಕಳೆದ ೪೦ ವರ್ಷಗಳಿಂದಲೂ ಸ್ವದೇಶೀಯ ಕಡೆಗೆ ಕೈಯೊಡ್ಡಿರುವುವಾದರೆ, ಅದು ಮಾಲವೀಯರ ನಿರಂತರ ಬೋಧನೆಯ ಪರಿಣಾಮ.

ಒಮ್ಮೆ ಅಲ್ಲಹಾಬಾದಿನಲ್ಲಿ ಪ್ಲೇಗ್ ರೋಗವು ತಲೆದೋರಿ ಅದು ನೂರಾರು ಜನರನ್ನು ಕೊಲ್ಲುತ್ತಿದ್ದಾಗ, ಮಾಲವೀಯರು ರಾತ್ರಿ ಹಗಲೆನ್ನದೆ ಕಷ್ಟಪಟ್ಟು, ೩೦೦೦ ಜನರನ್ನು ಒಂದು ಪ್ರತ್ಯೇಕ ಪ್ರದೇಶಕ್ಕೆ ಕರದೊಯ್ದು, ಅವರ ರಕ್ಷಣೆಗಾಗಿ ಏರ್ಪಾಡುಗಳನ್ನು ಸರಕಾರದವರಿಂದ ಬೇಡಿ ಮಾಡಿದರು.

ಮಾಲವೀಯರು ಹಿಂದೂ ಮುಸಲ್ಮಾನ ಒಗ್ಗಟ್ಟಿಗಾಗಿ ೧೯೩೨ನೇ ಇಸವಿ ನವಂಬರ ತಿಂಗಳಿಂದ ಇಂದಿನ ವರೆಗೂ ಹೆಣಗಾಡಿ ಯುನಿಟಿ ಕೊನ್ಫರೆನ್ಸನ್ನು ಜಯಶೀಲವಾಗಿ ಮಾಡಿದ ವಿಷಯವು ಮರೆಯುವಷ್ಟು ಹಳೆಯದಾಗಿಲ್ಲ. ಶ್ರೀ. ಮಾಲವೀಯರು ಚಿರಕಾಲ **ಬಾಳಲಿ!**

ಶ್ರೀ ಪಿ. ವಿ. ನಾಗರಾಜಶೆಟ್ಟಿ, ಹೊಳೆನರಸೀಪುರ.

# "AWAY WITH ORTHODOXY"

## AN APPEAL BY A 'SERVANT'

Fie upon you! Away, away from us! You have created enough of trouble and havoc to Mother India whose tender cord of spirituality has been sapped of all its vitality and energy rendering her an emaciated being subject to tortures by foreign nations, greedy of wealth and mad after material happiness.

Brothers, it is time—rather it is too late—that our bigotry and social religious and political differences should be cast to the winds and thrown to the gutters. From time immemorial we were fighting like cats and dogs to achieve our selfish ends, mad after money, wealth and riches and positions, not knowing that all of us are moulded out of the same metal—the One, Indivisible, Supreme Brahman. All these so-called scriptural, sectarian religions have simply blinded our steadfast faith in the External which is the very plank underneath our feet. Most of our precious hours are wasted in unnecessarily picking up flaws of others, quarreling with our own brothers and sisters–our own kith and kin—our own dearest and nearest, off-shoots of Mother Divine. How often we indulge in sarcasm! How grossly selfish we are!! Enough of them. Let us shoot straight into the core of our hearts. There in the domain of God, we find no religious differences, no social or no political bondage, no caste, no creed, no conventions, no customs, no sex. Nothing of these fetters. There all is peace and love. There is the vast fertile plan of Supreme Love and Happiness. Brindavan is there with its celestial glory and eligance. Look! what Sree Krishna said in Bhagavadgita. "Avoiding all Dharmas come to Me alone, I will protect thee".

Here' "all Dharmas" refer to nothing but water-fight compartments of bookish and customary religions which keep away man from man and creating struggles and miseries everywhere! Our ears are deafened with the death-knell of eternal wars waged against our own reflections of souls. History has taught us that pride of power and wealth is the chief cause of the dawnfall of nations without exception. When life is so fleeting and transitary, why should we remain slaves of customs and conventions?

Brothren and sisters! Where are we? We are on the threshold of Death—nay, we are on the verge of Death. Religious, social and political indifferences are eating into the vitals of our Nation, Swarna Bhumi —Jamabhumi—Punyabhumi. These silly feuds and quarrels born of sheer ignorance of knowledge of our own eternal self are corroding into the very marrow of Bharatmata. We engage in eternal warfare solely because we do not know the importance of God's creation. India is but a speck when compared to the Lord's vast Creation of worlds–worlds both visible and invisible to our naked eyes. Yet, instead of shaking hands with our own brothers and sisters on this small spot of the vast globe of creation, we exhibit our lower brutal nature,—we manifest barbarism. When we are ourselves antagonistic to our own Eternal and Sweet Self who else is to be blamed? We have but to find repose only in our Deepest Self and nobody will come to our succour. Temples, Churches and Mosques are nothing when compared to God's infinite, merciful and benevolent Gift. So, why monopolise them? Why not we be all equal partners in reeping the benefits accruing therefrom? Are we not all sailing in one and the same vessel intent to reach a common goal. The shore is yet afar. There is on the one hand the fear of turbulent waves which may at any time sink the ship down into the depth of the deep. There is on the other hand the apprehension of storms and hurricanes which toll our death-knell at every hour, at every minute. Misfortune is staring at our very face. At such a time as this, shall we not clasp together one and all and feel the eternal warmth of love? Know you not that one silent call Divine will take us all to the abode of death irrespective of caste, creed, customs and conventions. When we are so sure that Death is our common heritage why not we all take refuge in the domain of His Holy Feet! When the All-pervading Lord is our common Father and Mother, why should we betray His infinite Love towards us—His innocent children? Therefore, my beloved brothern, let us patch up all our quarrels and futile indifferences. Let us march on boldly towards the Palace of Peace and Happiness. Calm and collected let us send up our innocent prayers to Him the Most High—to grant us Sahkti to steer clear through the waves of Ignorance and age-long superstition and orthodoxy!

ಅತ್ಯುತ್ಕೃಷ್ಟ ! ಅತ್ಯುತ್ತಮ !

# ಕಾಮಿನಿಯಾ ಟೊಯ್ಲೆಟ್ ಸೋಪ್

ಅದನ್ನು ಉಪಯೋಗಿಸಿದವರಿಗೆ ಅದರ ಪ್ರಾಶಸ್ತ್ಯವೂ,
ಪ್ರಯೋಜನವೂ ತಿಳಿದುಬಾರದಿರದು

**ಉತ್ತಮ ತರಗತಿಯ ಬಹು ಬಗೆಯ ಕಾಮಿನಿಯಾ ಸೋಪುಗಳನ್ನೇ ಉಪಯೋಗಿಸಿರಿ!**

ಕಾಮಿಸಿಯಾ ವೈಟ್‌ರೋಸ್ ಸಾಬೂನು, ಕಾಮಿನಿಯಾ ಸೇಂಡಲ್ ಸಾಬೂನು, ಕಾಮಿನಿಯಾ
ಟ್ರಾನ್ಸ್‌ಪೇರೆಂಟ್, ಗ್ಲಿಸಿರಿನ್ ಸಾಬೂನು, ಕಾಮಿನಿಯಾ ಲವೆಂಡರ್ ಸಾಬೂನು,
ದಿಲ್‌ಬಾರ್ ಸಾಬೂನು.

ಈ ಮೇಲಿನ ಎಲ್ಲಾ ಸಾಬೂನುಗಳು ಬಹಳ ಪರಿಮಳಭರಿತವಾಗಿದ್ದು ಉಪಯೋಗಿಸುವಾಗ ಮನಾಹ್ಲಾದವನ್ನುಂಟುಮಾಡುತ್ತವೆ

## ಕಾಮಿನಿಯಾ ಸಾಬೂನನ್ನೇ ಉಪಯೋಗಿಸಿರಿ!

ಅದನ್ನು ಅಂಗಡಿಯಿಂದ ಪಡೆಯುವಾಗ ಅದರ ಗುಣ ಮತ್ತು ಶುದ್ಧತೆಯ ಚಿಹ್ನೆಯಾದ "ಕಾಮಿನಿಯಾ" ಎಂಬುದಿದೆಯೋ ನೋಡಿರಿ.

**3 ತುಂಡುಗಳಿರುವ ಪೆಟ್ಟಿಗೆಗೆ**

ರೂಪಾಯಿ **1-0-0.** ವಿ. ಪಿ. ಖರ್ಚು ಪ್ರತ್ಯೇಕ.

ಮಂಗಳೂರು ಏಜಂಟರು—ದಿ ಷಹಾ ಕಂಪೆನಿ, ಮಂಗಳೂರು.

**SOLE AGENTS:-**

**Anglo Indian Drug & Chemical Co.,**
155 Jumma Masjid—Market,
P. O. Box 2082 BOMBAY.

# ದೀಪಾವಳಿ.

ಲೇಖಕರು:—ಶ್ರೀ. ಗುಂಡು ರಾವ್, ಬೆಂಗಳೂರು.



ನಮ್ಮ ಮನೆಗೆಲ್ಲಾ ನಾವಿಬ್ಬರೇ. ನಾನೂ ನನ್ನ ಹೆಂಡತಿ. ಅಥವಾ ನನ್ನ ಹೆಂಡತಿ, ನಾನು. ನನ್ನ ತಾಯಿತಂದೆಗಳು, ನಾನು ಕೇವಲ ಬಾಲಕನಾಗಿದ್ದಾಗಲೇ ತೀರಿ ಹೋಗಿದ್ದರು. ನನಗೆ ಅಣ್ಣ ತಮ್ಮಂದಿರೂ, ಅಕ್ಕತಂಗಿಯರೂ, ಯಾರೂ ಇಲ್ಲವೇ ಇಲ್ಲ. ಮಕ್ಕಳಿನ್ನೂ ಆಗಿಲ್ಲ. ಬಂಧುಬಾಂಧವರಿರುವುದಕ್ಕೆ ನಾವಿರುವುದು ನಮ್ಮೂರಲ್ಲ ಲ್ಲ. ಮೈಸೂರಿನಿಂದ ಮದ್ರಾಸಿನ ತನಕ ಯಾವ ನೆಂಟರು ತಾನೇ ಹುಡುಕಿಕೊಂಡು ಬಂದಾರು? ಅತಿಥಿ ಅಭ್ಯಾಗತರು ನಮ್ಮ ಮನೆಯ ಕಡೆಗೆ ತಿರುಗಿ ನೋಡುವ ಹಾಗೆಯೇ ಇಲ್ಲ. ಮೊದಲು ನಮಗಿದ್ದರಲ್ಲವೆ?—ಅತಿಥಿ ಸತ್ಕಾರಕ್ಕೆ!

ನಮ್ಮ ಮನೆಯಿದ್ದುದು ಒಂದಾನೊಂದು ಕಟ್ಟಡದ ಮೂರನೇ ಅಂತಸ್ತಿನಲ್ಲಿ. ಮನೆಯೆಂದರೆ ನಮ್ಮೂರಿನ ಹಾಗೆ, ಅಡಿಗೆಯ ಮನೆಯೇ ಬೇರೆ; ನಡುಮನೆಯೇ ಬೇರೆ; ಬಚ್ಚಲು ಮನೆಯೇ ಬೇರೆ; ಊಟದ ಮನೆಯೇ ಬೇರೆ; ದೇವರ ಮನೆಯೇ ಬೇರೆ; ಹೀಗಲ್ಲ. ಇವೆಲ್ಲವೂ ಸೇರಿ ಒಂದೇ ಒಂದು ಕೊಠಡಿ! ಒಂದು ಮೂಲೆಯಲ್ಲಿ ಅಡಿಗೆಯ ಸಾಮಾನು; ಮತ್ತೊಂದು ಮೂಲೆಯಲ್ಲಿ ಹಾಸಿಗೆ ಬಟ್ಟೆಗಳು; ಇನ್ನೊಂದು ಮೂಲೆಯಲ್ಲಿ ಕೆರ, ಜೋಡು ವಗೈರೆ. ನಾವಿದ್ದುದು ಅರಳಿಯ ಮರದ ಮೇಲಿರುವ ಗುಬ್ಬಿಗಳ ಹಾಗೆ. ನಾವಿದ್ದ ಕಟ್ಟಡದಲ್ಲಿ ಸುಮಾರು ೬೦೦ ಕೊಠಡಿಗಳು. ಹೆಚ್ಚು ಕಡಿಮೆ ಅಷ್ಟೇ. ನನ್ನ ಹೆಂಡತಿ ದೇವರ ಮುಂದೆ ತುಪ್ಪದ ದೀವಿಗೆಯನ್ನು ಹಚ್ಚಿ, ದೇವರ ನಾಮವನ್ನು ಹೇಳುತ್ತಾ ಕುಳಿತುಕೊಳ್ಳುವಳು. ನಾಗರಿಕ ಕಾಲದ ನವವಧುಗಳೇನಾದರೂ ನಮ್ಮ ಗೌರಿಯನ್ನು ನೋಡಿದ್ದರೆ, "ಮೂದೇವಿ! ಮೂರು ಹೊತ್ತೂ ಮನೆಯಲ್ಲೇ ಬಿದ್ದಿರುತ್ತೆ" ಎಂದು ಜರಿದಾಡುತ್ತಿದ್ದರು. ಜುಟ್ಟು ಬೈತಲೆ, ಕನ್ನಡಕದ ಹುಡುಗಿಯರನ್ನು ನೋಡಿದಾಗಲಂತೂ ಅವಳ ಆಶ್ಚರ್ಯಕ್ಕೆ ಪಾರವೇ ಇಲ್ಲ. ಸುತ್ತುಮುತ್ತಲಿನವರು ಆಡುತ್ತಿದ್ದ ಮಾತನ್ನು ಕೇಳಿದಾಗ, "ಅಯ್ಯೋ ರಾಮ! ಇದೆಂತಹ ಗಲೀಜು ಭಾಷೆ" "ಗಿಜಾ ಬಿಜಾ ಅನ್ನುವುದು" ಎನ್ನುವಳು. ಒಂದೊಂದು ದಿವಸ ಮೈಸೂರಿನಲ್ಲಿ ಹುಟ್ಟಿ, ಮೈಸೂರಿನಲ್ಲಿ ಬೆಳೆದು, ಮೈಸೂರು ಮಹಾರಾಜರನ್ನು ನೋಡಲಿಲ್ಲವಲ್ಲಾ! ಕಾವೇರಿಯಲ್ಲಿ ಸ್ನಾನವನ್ನು ಮಾಡಲಿಲ್ಲವಲ್ಲಾ! ನಂಜನಗೂಡಿಗೆ ಹೋಗಿ ನಂಜುಂಡೇಶ್ವರನ ದರ್ಶನ ಮಾಡಲಿಲ್ಲವಲ್ಲಾ!" ಎಂದು ಮರುಗುವಳು. ಗೌರಿಯೂ ನನ್ನಂತೆಯೇ ಮಾತಾಪಿತೃ ವಿಹೀನೆ. ಅವಳನ್ನು ಸಾಕಿ ಸಲಹಿದ, ಅವಳ ಸೋದರ ಮಾವನು, ನನ್ನ ಕೈಯಲ್ಲಿ ಅವಳ ಕೈಯನ್ನು ಇಟ್ಟಿದ್ದನು. ಕಂತೆಗೆ ತಕ್ಕ ಬೊಂತೆಯಲ್ಲವೇ? ಗೌರಿಯು ನನಗೆ ತಕ್ಕ ಹೆಂಡತಿ. ಮದ್ರಾಸಿನ ಸೆಂಟ್ರಲ್ ಬೇಂಕಿನಲ್ಲಿ ನನಗೆ ಕ್ಲಾರ್ಕ ಕೆಲಸ. ನನ್ನ ವರಮಾನವೂ ನನ್ನ ಖರ್ಚಿಗೆ ಸಾಲುತ್ತಿರಲಿಲ್ಲ. ಆದರೂ ಗೌರಿಯು ಬುದ್ಧಿವಂತಳಾದುದರಿಂದ, ನಾವು ಮೈಸೂರನ್ನು ಮರೆತು ಸುಖವಾಗಿಯೆ ಇದ್ದೆವು.

ಒಂದು ದಿವಸ ಮಧ್ಯಾಹ್ನ ಮೂರು ಘಂಟೆಯ ಸಮಯ—ನಾನು ಬೇಂಕಿನಲ್ಲಿ ಕುಳಿತು ನನ್ನ ಕೆಲಸಗಳನ್ನು ಮಾಡುತ್ತಿದ್ದೆನು. ಅಕಸ್ಮಾತ್ತಾಗಿ ಸೆಕ್ರಿಟೆರಿಗಳು ಬಂದು "ನೀನೂ ಮೆನೇಜರರೂ ಸೇರಿ ೨೦೦೦೦ ರೂಪಾಯಿಗಳನ್ನು ದಸ್ತುಮಾಡಿರುವುದಾಗಿ ತಿಳಿದು ಬರುತ್ತದೆ. ಇದು ನ್ಯಾಯಸ್ಥಾನದಲ್ಲಿ ವ್ಯವಹರಿಸಲ್ಪಡುವುದು. ಇಂದಿನಿಂದ ನಮ್ಮ ಬೇಂಕಿನೆಲ್ಲಿ ನಿನಗೆ ಕೆಲಸವಿಲ್ಲ" ಎಂದು ಪಟಪಟನೆ ಹೇಳಿದರು. ನಾನು ಅವಾಕ್ಕಾದೆನು. ಬರಸಿಡಿಲು ಬಡೆದಂತಾಯಿತು. ಒಡನೆ 'ಯಾವ ವಿಚಾರವೂ ನನಗೆ ತಿಳಿಯದು' ಎಂದೆನು. ನನ್ನ ಮಾತು ತುಟಿಯಿಂದ ಹೊರಡುವುದರೊಳಗಾಗಿ ಸೆಕ್ರಿಟೆರಿಗಳು ಅಲ್ಲಿಂದ ಹೊರಟುಹೋಗಿದ್ದರು; ನಾನು ಕ್ಲೇಶದಿಂದ ಯೋಚಿಸುತ್ತಿದ್ದಾಗಲೇ ಸೆಕ್ರಿಟರಿಗಳಿಂದ ಆಜ್ಞಾಪತ್ರವು ಬಂದಿತು. ದುರ್ದೈವವನ್ನು ಹಳಿಯುತ್ತಾ ಇದ್ದೆನು. ಇಷ್ಟರಲ್ಲಿ ಇಬ್ಬರು ಪೋಲೀಸರು ಬಂದು ನನ್ನನ್ನು ಸೆರೆಹಿಡಿದರು. ಸ್ಟೇಶನಿಗೊಯ್ದು ಒಬ್ಬ ಮಿತ್ರರ ರಿಮಾಂಡಿನ ಮೇಲೆ ಬಿಟ್ಟರು.

ಮುಂದೆ ಒಂದು ತಿಂಗಳು ಕಳೆಯಿತು. ಕೋರ್ಟಿನಲ್ಲಿ ತೀರ್ಮಾನವಾಗಲಿಲ್ಲ. ತೀರ್ಮಾನವಾಗುವ ವರೆಗೂ ನಾನು ಬೇರೆ ಕೆಲಸಕ್ಕೆ ಸೇರುವ ಹಾಗಿಲ್ಲ. ನನ್ನ ದುರ್ದೆಸೆಗೆ ಏನು ಕಾರಣವೆಂದು ನನಗೆ ತಿಳಿಯದಾಯಿತು. ಇದೇನು ಕನಸೇ? ಮನೆಯಲ್ಲಿದ್ದ ಪದಾರ್ಥವೆಲ್ಲವೂ ಮುಗಿದುವು. ಕೈಯಲ್ಲಿ ಒಂದು ಕಾಸೂ ಇಲ್ಲದಂತಾಯಿತು; ಬೆಳಗಾದರೆ ಒಂದು ಕಾಳು ಅಕ್ಕಿ ಇಲ್ಲ. ಮನೆಯ ಮ್ಹಾಲಿಕನು ಬಾಡಿಗೆಗಾಗಿ ತಿರುಗತೊಡಗಿದನು. ಹಾಲು ಮೊಸರಿನವರೊಂದು ಕಡೆ ಕೇಳಲಾರಂಭಿಸಿದರು. ಸಾಲದಂಗಡಿಯವನು ಮನೆಯ ಬಾಗಲಿಗೆ ಬಂದು ಕೂಗಲಾರಂಭಿಸಿದನು. ಇದೆಲ್ಲವನ್ನೂ ನೋಡಿ ನನಗೆ, "ಕೋರ್ಟಿನವರಾದರೂ ಏಕೆ ಬೇಗ ಸಜವನ್ನು ವಿಧಿಸಬಾರದು!" ಎಂದೆನ್ನಿಸಿತು. ಆಗ ಗೌರಿಯು ತನ್ನ ಕೊರಳಲ್ಲಿದ್ದ ಕಾಸಿನ ಸರವನ್ನು ತೆಗೆದು ನನ್ನ ಕೈಗೆ ಕೊಟ್ಟು "ಇದನ್ನು ಹೋದಷ್ಟಕ್ಕೆ ಮಾರಿ, ಬಂದುದನ್ನು ತಂದು, ಕೊಡಬೇಕಾದವರೆಲ್ಲರಿಗೂ ಕೊಟ್ಟು ಬಿಡಿ. ಅನಂತರ ಉಪವಾಸದಿಂದ ಸತ್ತರೂ ಋಣಮುಕ್ತರಾಗಿ ಸಾಯೋಣ" ಎಂದಳು. ಅವಳ ಮಾತುಗಳನ್ನು ಕೇಳಿ ನನಗೆ ಕಣ್ಣಿನಲ್ಲಿ ನೀರೂರಿತು. ನಾನು ಗತ್ಯಂತರವಿಲ್ಲದೆ ಅದನ್ನು ಮಾರಿ, ಕೊಡಬೇಕಾದವರಿಗೆಲ್ಲಾ ಕೊಟ್ಟು, ಉಳಿದ ಹಣದಿಂದ ಮನೆಯ ಪದಾರ್ಥಗಳನ್ನು ತಂದೆನು. ಬಡವರಿಗೆ ಕಷ್ಟ ಬಂದರೆ ಮೇಲೆ ಮೇಲೆ!

ಎಂಟು ದಿನಗಳು ಕಳೆದುವು. ಒಂಭತ್ತನೆಯ ದಿನವು ಬಂದಿತು. ಮತ್ತೊಂದಾವರ್ತಿ ಮನೆಯು ಸುಧಾಮನ ಮನೆಯಂತಾಯಿತು. ಮಾಡಲು ಕೆಲಸವಿಲ್ಲ. ತಿನ್ನುವುದಕ್ಕನ್ನವಿಲ್ಲ. ಮಧ್ಯಾಹ್ನವಾಯಿತು. ಗೌರಿಯು ಗುಂಡನ್ನೆಲ್ಲಾ ಹುಡುಕಿ ಎಂದೋ ಇಟ್ಟಿದ್ದ ಆರು ಬಿಲ್ಲೆಗಳನ್ನು ತಂದು ನನ್ನ ಕೈಗೆ ಕೊಟ್ಟು "ಇಂದು ನಮ್ಮ ಪ್ರಾಯೋಪವೇಶದ ಮೊದಲನೆಯ ದಿನ! ಹೂವನ್ನೂ ಹಣ್ಣನ್ನೂ ತಂದು ದೇವರ ಪೂಜೆಯನ್ನು ಮಾಡಿ" ಎಂದಳು. ನಾನು ಹೂವನ್ನೂ ಎರಡು ಬಾಳೆಯ ಹಣ್ಣನ್ನೂ ತರುವ ಹೊತ್ತಿಗೆ ಗೌರಿಯು ಮನೆಯನ್ನೆಲ್ಲಾ ಸಾರಿಸಿ, ರಂಗವಲ್ಲಿಯನ್ನಿಟ್ಟು, ದೇವತಾರ್ಚನೆಗೆ ಅಣಿಮಾಡಿದ್ದಳು. ನಾನು ಮಿಂದು ಮಡಿಯುಟ್ಟು, ದೇವತಾರ್ಚನೆಯನ್ನು ಮಾಡಿದೆನು. ಗೌರಿಯು ಶ್ರದ್ಧಾಭಕ್ತಿಯಿಂದ ನಿಂತು ನೋಡಿದಳು. ನೈವೇದ್ಯಕ್ಕೆಂದು ತಂದಿದ್ದ ಹಣ್ಣುಗಳಲ್ಲಿ ಒಂದನ್ನು ನಾನೂ, ಒಂದನ್ನು ಗೌರಿಯೂ ತಿಂದು ಆ ದಿನವನ್ನು ಕಳೆದೆವು

ಮರುದಿನವೇ ಭಾರತವರ್ಷದಲ್ಲೆಲ್ಲಾ ಪ್ರಸಿದ್ಧವಾದ **ದೀಪಾವ**ಳಿಯ ಹಬ್ಬ! ಆಸೇತು ಹಿಮಾಲಯ ಪರ್ಯಂತವೂ ದೀಪಾವಳಿಯನ್ನು ಆಚರಿಸದವನಿಲ್ಲ. ಹೊಸ ಅಳಿಯಂದಿರಿಗಂತೂ ಎಲ್ಲೂ ಇಲ್ಲದ ಸಡಗರ. ಯಾರ ಮನೆಯನ್ನು ನೋಡಿದರೂ ತಳಿರು ತೋರಣಗಳಿಂದಲಂಕೃತವಾಗಿದೆ. ಎಲ್ಲರೂ ಆನಂದಪಡುತ್ತಾ ಹಬ್ಬದೂಟಗಳನ್ನುಣ್ಣುತ್ತಿರುವರು. ಆದರೆ, ನನಗೂ ನನ್ನ ಗೌರಿಗೂ, ಮೂರು ಹೊತ್ತಿನಿಂದಲೂ ಕೂಳಿಲ್ಲ! ಎಲ್ಲೆಲ್ಲಿಯೂ ಗಾಯನ ನರ್ತನಗಳು! ಎಲ್ಲೆಲ್ಲಿಯೂ ವಾದ್ಯರವಗಳು! ಆದರೇನು?—ನಮಗೆ ಹೊಟ್ಟೆಗನ್ನವೇ ಇಲ್ಲ. ಹತಭಾಗ್ಯರು!

ಸುತ್ತುಮುತ್ತಲಿನ ಹುಡುಗರು ಹೊಡೆಯುತ್ತಿದ್ದ ಪಟಾಕಿಯನ್ನು ನೋಡಿ ಗೌರಿಯು, "ಅಯ್ಯೋ! ಅವರು ಪಟಾಕಿಯನ್ನು ತಂದು ಸುಡುವ ದುಡ್ಡು ನಮ್ಮಲ್ಲಿದ್ದರೆ............ನಾವು ಹೀಗೆ ಹೊಟ್ಟೆಗಿಲ್ಲದೆ, ಅಳಬೇಕಾಗಿರುತ್ತಿತ್ತೆ!" ಎಂದು ವ್ಯಸನಪಟ್ಟಳು. ನಾನು "ಅಯ್ಯೋ! ದೇವರೆ, ನನ್ನ ಜೊತೆಗೆ ಈ ಗೌರಿಯೂ ಹೊಟ್ಟೆಗಿಲ್ಲದೆ ಸಾಯುವಂತೆ ಮಾಡಿದೆಯಾ?" ಎಂದು ದೇವರಲ್ಲಿ ಮೊರೆಯಿಟ್ಟೆನು. ಬಹುಶಃ ದೇವರು ಕೂಡ, ಪಟಾಕಿಯನ್ನು ಹೊಡೆಯುತ್ತಲೋ, ಹಬ್ಬದೂಟವನ್ನುಣ್ಣುತ್ತಲೋ, ಗಾಯನವನ್ನು ಕೇಳುತ್ತಲೋ ಅಥವಾ ನರ್ತನವನ್ನು ನೋಡುತ್ತಲೋ ಇದ್ದನೆಂದು ತೋರುತ್ತದೆ! ಆದ್ದರಿಂದಲೇ ನನ್ನ ಮೊರೆಯು ಅವನಿಗೆ ಕೇಳಿಸಲಿಲ್ಲ!!! "ವರ್ಷಕ್ಕೊಂದು ದೀಪಾವಳಿಯ ಹಬ್ಬ. ಈ ದಿವಸ ನಮ್ಮ ಹೊಟ್ಟೆಗೆ ಹಿಟ್ಟು ದೊರೆಯದಾಯಿತೆ" ಎಂದು ಇಬ್ಬರೂ ಮರುಗಿ ಮರುಗಿ ಮಲಗಿದೆವು. ಹೊಟ್ಟೆಗಿಲ್ಲದ್ದಕ್ಕೋ ಅಥವಾ ಮನದ ಬೇಗುದಿಗೋ, ಪ್ರಜ್ಞೆ ತಪ್ಪಿ ನಿದ್ರೆ ಬಂದಿತು.

ಮೂರನೆ ದಿವಸ ಬೆಳಗಾಯಿತು. ಸೂರ್ಯದೇವನು ಕಿಟಕಿಯ ಕಂಡಿಯಲ್ಲಿ ಇಣಕಿ ನೋಡಲಾರಂಭಿಸಿದನು. ನಮಗೂ ಎಚ್ಚರವಾಯಿತು. ಎದ್ದು ಮಾಡುವುದೇನೆಂದು ಮಲಗಿಯೇ ಇದ್ದೆವು. "ಈ ಹಾಳು ಬೆಳಕೇಕಾಯಿತೋ!" ಎಂದುಕೊಂಡೆವು. ಏಳಲೊಬ್ಬರಿಗೂ ಮನಸಿಲ್ಲ. ಗಡಿಯಾರವು "ಠಕ್, ಠಕ್" ಎಂದು

೧೨ನೇ ಪುಟವನ್ನು ನೋಡುವುದು.

# ಕೊಲೆಗಾರ.



(ಒಂದು ಶಬ್ದ ಚಿತ್ರ.)

ತುಂಟರ ತಂಡದ :ವಿಠ್ಠಲಸುತ ಬೆಳಗಾಂವಿ.

"ಮಧುಕರವು, ಕಮಲಿನಿಯ ಸುತ್ತಲೂ ತಿರುಗುವುದು, ಗುಂಜಾರವ ಮಾಡುವುದು, ಕುಣಿಯುವುದು. ಆಡುವುದು, ಕೆಲೆಯುವುದು, ಲಾಗ ಹೊಡೆಯುವುದು. ಇನ್ನು ಅನೇಕ ಬಗೆಯ ಪ್ರೇಮಾಲಾಪಮಾಡುವುದು. ಇದೆಲ್ಲ ಏಕೆಂದು? ಕಮಲಿನಿಯಲ್ಲಿಯ ಮಧುರ ಮಧುವನ್ನು ಸವಿಯಲೆಂದಲ್ಲದೆ ಇನ್ನೇನು? ಮಧುವು ತೀರಿದೊಡನೆ ಅದು ಹಾರಿ [illegible]; ಮಧುವು ತೀರಿದ ಕಮಲಿನಿಯು, ಮಧುಕರದ ವಿರಹದಿಂದ ಕೊರಗಿ ಕೊರಗಿ ಆತ್ಮತ್ಯಾಗಮಾಡುವುದು.

"ಅವಳು ಅವನನ್ನು ಹುಡುಕಿದಳು, ಹುಡುಕಿ ಹುಡುಕಿ ಬೇಸತ್ತಳು; ಊರು [illegible] [illegible]-ಗಂಹರ, ದರಿ-ಕಂದರ, ವನ-ಉಪವನ, ಮನೆ-ಮಾಡು ಮೊದಲಾದವುಗ[illegible] ಹುಡುಕಿದಳು. ಆದರೆ ಅವನ ಬೇಟೆಯಾಗುವುದೊತ್ತಟ್ಟಿಗುಳಿದು ಅವನು [illegible]ವನೆಂಬ ಸುಳಿವು ಕೂಡ ತಿಳಿದು ಬರಲಿಲ್ಲ. ಬಡತನಕ್ಕೆ ಹೆದರಿ ಓಡಿದವನು [illegible] ಹಿಂದಿರುಗಲಿಲ್ಲ. ಬೇಡಿ ತರುವೆನೆಂದಿದ್ದವನು ಭಿಕ್ಷೆಯನ್ನು ತರಲಿಲ್ಲ— [illegible] ಅವಳಿಗೆ ಕತ್ತಲೆ ಕಂಡುಕೊಂಡಿತು. ಅವನು 'ನನ್ನನ್ನು ಮೋಸಗೊಳಿಸಿರಬಹುದೇ? ಜೀವನದಲ್ಲಿ ನಿರಾಶೆಗೊಂಡು ಪ್ರಾಣತ್ಯಾಗ ಮಾಡಿರಬಹುದೇ?" ಅವಳು ಸಂಶಯಕ್ಕೊಳಗಾದಳು.

"ಒಂದು ವೇಳೆ ಹಾಗಿದ್ದುದಾದರೆ . . . ಅಮ್ಮಮ್ಮಾ" . . . ಅವಳ ಕಣ್ಣುಗಳು ಕತ್ತಲುಗೂಡಿದಂತಾಗಿ ಚಂಚಲಚಿತ್ತಳಾದ ಅವಳೆದುರಿಗೆ ಅನೇಕ ಬಗೆಯ ಭೀಕರ [illegible]ಗಳು ಕಾಣತೊಡಗಿದಂತೆ ಅವಳಿಗೆ ಭಾಸವಾಯಿತು.

"ಅದು ನಿಜವಾದರೆ . . . ಅದರೆ, ನಾನು ನಿರ್ಗತಿಗಳಾದೆ, ಬಡವನಾದರೇನು? [illegible]ಣಾಢ್ಯ ಪತಿಯಿಲ್ಲವೇ ಎಂದು ವಿವಾಹವಾದೆ. ಅವನ ಆ ಮೋಹಕ ರೂಪಕ್ಕೆ, ಒಳ್ಳೆಯ ನಡೆನುಡಿಗಳಿಗೆ ಅಂದು ಮನಸೋತು ನನ್ನ ನೇತ್ರಯುಗವನ್ನು ಆಕುಂಚಿತಗೊಳಿಸಿದುದರ ಪರಿಣಾಮವೇ ನಾನು ಈಗ ಗತಿಗೆಟ್ಟುದು? ದೇವರೇ ಇನ್ನು ನನ್ನ ಗತಿಯೇನು?" ಅವಳ ಕಣ್ಣುಗಳಿಂದ ನೀರು ಧಾರೆಗಟ್ಟಿದುವು. ಆಕಾಶದಲ್ಲಿ ತಾರೆಗಳು ಮಾತ್ರ ಅವಳ ದುಃಖಕ್ಕೆ ಪಾಲುಗಾರರಾಗಿದ್ದಂತೆ ತಾವೂ ಅಶ್ರುಪೂತ ನಯನಗಳಿಂದ ಇವಳ ಕಡೆಗೆ ನೋಡುತ್ತಿದ್ದುವು. ಅವಳು ಮೂಕರೋದನ ಮಾಡತೊಡಗಿದಳು. ಒತ್ತಿ ಅಳಲಿಕ್ಕೂ ಲೋಕದ ಅಂಜಿಕೆ!

"ಅವನು ಮರಳಿ ಬರಬಹುದೇ? . . . ಉದ್ಯೋಗವನ್ನು ಸಂಪಾದಿಸಿಯೇ ಬರಬಹುದೇ . . . ಅಷ್ಟರ ತನಕ ನನ್ನ ಹೊಟ್ಟೆಯಲ್ಲಿ ಅವನಿಂದ ಮೂರ್ತಿಗೊಂಡಿರುವ ಈ ಮೂರ್ತಿಯ ಗತಿಯೇನು? ಹೆರಿಗೆಯ ನೋವಾಗುತ್ತಿದೆ. ಬಟ್ಟೆಯಿಲ್ಲ ಬರೆಯಿಲ್ಲ, ಜನವಿಲ್ಲ–ಧನವಿಲ್ಲ. ಈ ಮುರಕಲು ಗುಡಿಸಲಿಗೆ ಯಾರು ಬರುವರು? [illegible]ದರ ಕಡೆಗೆ ನೋಡಿ, ಸುಮ್ಮನೆ ಕುಳಿತರೆ, ನನ್ನ ಮಾನದ ಗತಿಯೇನು? ಪತಿಯನ್ನು ನಂಬಿದುದಕ್ಕಾಗಿ ನನ್ನ ನಿಕಟ ಸಂಬಂಧಿಕರು ಕೂಡ ನನ್ನನ್ನು ಹೊರದೂಡಿರುವರು. ಹಾಗಾದರೆ, ಈ ಜಗತ್ತಿನಲ್ಲಿ ನನ್ನವರು ನನ್ನನ್ನು ಆದರಿಸುವವರು ಯಾರಿರುವರು? ಅಮ್ಮಮ್ಮಾ, ಬಡತನದ ಬಿರುಸಾಟವೇ! ಈ ಉದರಲ್ಲಿ ಮೂರ್ತಿಗೊಂಡ ಮೂರ್ತಿಯನ್ನು ಅಮೂರ್ತಗೊಳಿಸಿದರೆ . . . ಛೀ! ಇದೆಂತಹ ಕ್ರೂರಕರ್ಮ! ನಮ್ಮ ಕರ್ಮಕ್ಕೆ ಪಾಪ! ಅದಕ್ಕೇಕೆ ಪ್ರಾಯಶ್ಚಿತ್ತ!! ಅವಳ ಆ ಮಾತೃಹೃದಯವು ಆ ಮುಂದಿನ ವಿಚಾರವನ್ನೇ, ಅವಿಚಾರವನ್ನೇ ಅಡಗಿಸಿಬಿಟ್ಟಿತು.

"ಅಂದು ನೀನು ನನ್ನೆಡೆಗೆ ಬಂದೆ, ಸವಿಮಾತುಗಳನ್ನಾಡಿದೆ, ಆಗ ನಾನು ಏನೂ ಅರಿಯದ ಜಗತ್ತಿನ, ಅದರಲ್ಲಿಯೂ ಪುರುಷರ ಹೃದಯವನ್ನು ಅರಿಯದ ಬಾಲೆಯಾ[illegible] [illegible] ಈ ಕಪಟತನವನ್ನು ನನ್ನಿಂದ ಆಗ ತಿಳಿಯುವುದಾಗಲಿಲ್ಲ. ನಾನು ಭಾವ[illegible]ಗೆ ಬಲಿಯಾದೆ, ನಿನ್ನನ್ನು ಸಮೀಪಕ್ಕೆ ಬರಗೊಟ್ಟೆ, ನೀನು ನನ್ನನ್ನು ಬರಸೆಳೆದೆ. ನಿನ್ನ ಭುಜಾಭುಜಗಳಿಂದ ಬಿಗಿಯಾಗಿ ಆಲಂಗಿಸಿದೆ. ನನ್ನ ಆರಕ್ತ ಕಪೋಲಗಳಿಗೆ ಮುದ್ದಿಟ್ಟೆ, ಆಗ ನನಗೆ ಹೇಗೆ ಹೇಗೋ ಎನಿಸಿತು, ಮೈಜುಮ್ಮೆಂದಿತು, ಕಣ್ಣುಗಳು ಅರೆಗಣ್ಣಾದವು, ಚಿತ್ತವು ಕಾತರಗೊಂಡಿತು. ನಾನು ನನ್ನನ್ನೇ ಮರೆತೆ. ನೀನು ಬಡವನೆಂದು ಮನೆಯವರು ತಿರಸ್ಕರಿಸಿದರೂ ನಾನು ನಿನಗಾಗಿ ನಿನ್ನನ್ನು ವಿವಾಹವಾದೆ. ನಿನ್ನಲ್ಲಿ ನಾನು ಅನುದಿನವೂ ಅನುರಕ್ತಳಾದೆ, ಅದರ ಪರಿಣಾಮವು ಆಗುವುದೇ ಆಯಿತು, ಬಡತನವು ಸಮೀಪವಾಯಿತೆಂದು ಅದು ಎತ್ತಲೊ ಮಾಯವಾದೆ, ಬಡತನದಲ್ಲಿ ಧೈರ್ಯಬೇಡವೇ? ಹಾ! ನಾಥ! ನನ್ನ ಅಬಲೆಯ ಕೊರಳನ್ನು ಹೀಗೆ ಕೂದಲೆಳೆಯಿಂದ ಕೊಯ್ಯಬಹುದೇ"? ಅವಳು ಮತ್ತೆ ಅಳತೊಡಗಿದಳು, ಕಾಲು ತಪ್ಪಿದ ಅಬಲೆಯರು ಹೀಗೆಯೇ ಅಳುತ್ತಾ ಮೂಲೆ ಹಿಡಿದು ಕುಳಿತುಕೊಳ್ಳುವುದಲ್ಲದೆ. ಬೇರೆ ವಿಹಿತ ದಾರಿಯನ್ನು ಅವರಿಗೆ ಶಿಷ್ಟರೆಂದೆನ್ನಿಕೊಳ್ಳುವವರು ಒಂದಾದರೂ ಇಟ್ಟಿರುವರೆ? ಹೀಗೆ ಏನೇನೋ ಅವಳು ತನ್ನಲ್ಲಿಯೇ ಒಡಗುಟ್ಟಿದಳು.

"ಯಾವ ಆಸೆಯಿಂದ ಅಂದು ನೀನು ಮರುಳಾದೆ? ಆಗ ನನ್ನೆದುರಿಗೆ ಆನಂದದ ಸಾಗರವೇ ಕಂಡಿದ್ದಿತಲ್ಲ! ಈಗ ದಾರಿದ್ರ್ಯದಿಂದಾಗಿ ಅದೆಲ್ಲ ಮೃಗಜಲ! ನಾನು ಅವನ ಪತ್ನಿ, ಗೃಹಿಣಿ, ಸಹಚಾರಿಣಿ, ಮನದನ್ನೆಯಾಗುವೆ, ಅವನೊಡನೆ ಆಯುಷ್ಯ ಕಳೆಯುವೆ, ಅವನೊಡನೆ ನಾನು ಆನಂದದ ಅತ್ಯುಚ್ಚಮೇರು ಶಿಖರದ ದರ್ಶನವನ್ನು ಪಡಕೊಳ್ಳುವೆ ಎಂದು ನಾನು ಅತ್ತನೋಡತೊಡಗಿದೆ. ಆದರೆ ಅದೇನಿಲ್ಲ, ಕಾಣುವುದೆಲ್ಲವೂ ಮಂಜು! ಹಾ! ಹಣದ ಮಹಿಮೆಯೆ! ಹಣವಿರುತ್ತಿದ್ದರೆ ಅವನು ಓಡುತ್ತಿದ್ದನೇ? ಹಾಯ್! ಹಾಯ್!! ಅಮೃತ ಕಲಶವೆಂದು ಪರಕಿಸದೆ ಹಾಲಾಹಲಕಲಶವನ್ನು ಕುಡಿದು ಬಿಟ್ಟೆ! ಬಡತನಕ್ಕೆ ಹೆದರುವವನೆಂದು ತಿಳಿದಿದ್ದರೆ, ಕಷ್ಟಕಾಲದಲ್ಲಿ ತೊರೆದು ಬಿಡುವವನೆಂದಿದ್ದರೆ ನಿನ್ನನ್ನು ಮೂಸಿ ನೋಡುತ್ತಿದ್ದಿಲ್ಲವಲ್ಲ! ಇನಿಯ, ನಿಜವಾಗಿಯೂ ನೀನು ಹಾಗಿರುವೆಯಾ? . . . ಇನ್ನು ನನ್ನ ಉದರದಲ್ಲಿ ಇದೀಗ ಅಡಗಿ ಕುಳಿತಿರುವ ನಿನ್ನ ಆ ಪ್ರೇಮಕ್ಕೆ ಸಾಕ್ಷಿಯಾದ ಉನ್ಮಾದದ ಕಿರುಮಂಜಿ ಬಣ್ಣದ ಸರೋವರದಲ್ಲಿ, ನೀನು ಪುಕ್ಕಟೆಯಾಗಿ ಈಸುತ್ತಿರಲು ನಿನ್ನ ಮೇಲೆ ಯಾವಾಗಲೂ ಗುಪ್ತಕಾವಲಿಡುವ ಕೂಸು. ಈ ನನ್ನ ಕಂದಮ್ಮನು ಅನನ್ಯಗತಿಕ ಶಿಶುವೆಂದು ಲೋಕದಿಂದ ದೂಡಿಸಿಕೊಳ್ಳಬೇಕಲ್ಲವೇ?

ಮತ್ತೆ ದುಃಖವು ಒತ್ತರಿಸಿ ಅವಳು ಅಳತೊಡಗಿದಳು. ಅತ್ತು ಅತ್ತು ಅವಳ ಕಣ್ಣೀರೆಲ್ಲ ಅಪ್ಪಿಸಿ ಹೋದವು. ಅವಳು 'ಮುಂದೇನು' ಎಂದು ವಿಚಾರ ಮಾಡತೊಡಗಿದಳು ಪತಿಯನ್ನು ಸಂಸಾರದಿಂದಲೇ ಓಡಿಸಿಬಿಟ್ಟ ದಾರಿದ್ರ್ಯದ ಶಕ್ತಿಯನ್ನವಳು ಸ್ಮರಿಸುತ್ತಿದ್ದಳು.

ಅವಳ ಮನದಲ್ಲಿ ಆ ವೇಳೆಗೆ ವಿಚಾರವಿಚಾರಗಳ ತುಮುಲ ಸಂಗ್ರಾಮವೆಸಗಿತು. ಕಡೆಗೆ ಅವಳು "ನನ್ನಂತಹ ಅಬಲೆಯರಿಗೆ ಆತ್ಮಹತ್ಯೆಯ ಹೊರತು ಬೇರೆ ಗತಿಯಿಲ್ಲ" ಎಂದು ಗೊತ್ತುಮಾಡಿಕೊಂಡಳು. ಆದರೆ, ತನ್ನ ಆತ್ಮಹತ್ಯದ ಪಾಪದ ಗೂಡ, ಬಾಲಹತ್ಯದ- ಈ ಲೋಕದಲ್ಲಿ ತಾನು ಬರಲೇಬೇಕೆನ್ನುವುದಕ್ಕೆ ಅಂತಹ ಯಾವ ಅಪರಾಧವೂ ಇಲ್ಲದ, ಅಲ್ಲದೆ, ಅದು ಲೋಕದಲ್ಲಿ ಬರಲೊಪ್ಪದಿದ್ದರೂ ನಾವಾಗಿಯೇ ಅದನ್ನು ಈ ಲೋಕಕ್ಕೆ ಸೆಳೆದು ತಂದ ಒಬ್ಬ ನಿರಪರಾಧಿಯಾದ ಇಂತಹ ಶಿಶುವು, ಈ ಲೋಕದ ಹೆಬ್ಬಾಲಿಗೆ 'ಇದೋ ಬಂದನು' ಎನ್ನುವರಷ್ಟರ[illegible] ನಿರ್ದಯ ಕಟುಕನಂತೆ ಅದರ ಕೊಲೆ ಮಾಡುವುದೇ? ಹೊತ್ತುಕೊಂಡ ಈ ನನ್ನ [illegible] ನನಗೆ ಭಾರವಾಗಿರುವಾಗ ಶಿಶುಹತ್ಯದ ಪಾಪವೊಂದು. ನನಗೆ ಸಹನ[illegible] ಹೇಗೆ? ಇಲ್ಲಿಗೆ ಬರಲು ಆ ಅಂತಕನೂ ಕೂಡ ನನಗೆ ಅಡ್ಡಿಮಾಡಲಾರ[illegible]

ಕಡೆಗೆ ಅವಳು ತನ್ನ[illegible] ಆಕಾಶವು ಬೆಳ್ಳಗಾಗಿದೆ. ಮುಂಜಾವಿನ [illegible] ಹಕ್ಕಿ ಕಿಲಿಬಿಲಿ ರವವನ್ನು ಮಾಡುತ್ತಿವೆ. ವಿಶ್ವವೆಲ್ಲವೂ ಎಚ್ಚರವಾಗುವುದರಲ್ಲಿದೆ. ಇಂತಹ ಪ್ರಶಾಂತ ವೇಳೆಯಲ್ಲಿ ಅವಳ ಉದರದಲ್ಲಿ ಮಾತೃಶೂಲೆಗಳೇಳ ತೊಡಗಿದುವು. ಅವಳಿಗೆ ತುಸು ಗ್ಲಾನಿ ಬಂದಂತಾಯಿತು ಬೆಳಗಿನ ಜಾವದಲ್ಲಿ ಅವಳು ಒಂದು ಶಿಶುವನ್ನು ಹಡೆದಳು.

ಅದು ಗಂಡು ಕೂಸು, ಗರ್ಭಾಶಯದಿಂದ ಅದು ಹೊರ ಬರುತ್ತಲೇ ಅವಳ ಕೈಗಳು ಆ ಶಿಶುವಿನ ಕತ್ತಿನೆಡೆಗೆ ಹೋದುವು. ಇನ್ನು ಅವಳು ಅದರ ಕತ್ತು ಒತ್ತುವವಳು! ಅಷ್ಟರಲ್ಲಿ ಅವಳ ಮಾತೃಹೃದಯವು ಮತ್ತೆ ಜಾಗ್ರತವಾಯಿತು. ಮೊಲೆಗಳು ಹಾಲಿನಿಂದ ತುಂಬಿ ಧಾರೆಯಾಗಿ ಆ ಶಿಶುವಿನ ಸಿರಿಮೊಗದ ಮೇಲೆ ಚಿಮ್ಮ ತೊಡಗಿದುವು.

ಅವಳು ಶಿಸುವನ್ನು ಕೈಗೆತ್ತಿ ಹಾಲುಣಿಸಿದಳು. ಶಿಸುವಿನ ಸ್ಪರ್ಶದಿಂದ ಅವಳಲ್ಲಿ ಯಾವುದೋ ಒಂದು ಚೈತನ್ಯವು ಜನಿಸಿ ಅವಳು ಆನಂದ ಪ್ರುಲುಕಿತಳಾದಳು.

ಕೆಲ ವೇಳೆಯ ಮೇಲೆ ಅವಳಿಗೆ ಮತ್ತೆ ಏನೊ ನೆನಪಾಗಿ ಶಿಸುವನ್ನು ಒಂದು ಮಿದುವಾದ ಹಾಸಿಗೆಯಲ್ಲಿ ಮಲಗಿಸಿದಳು. ತಾನು ಅಲ್ಲಿಂದ ಎದ್ದು, ಒಂದು ಮಾಡ (ಗೂಡಿನ)ದಲ್ಲಿ ಅಡಗಿಸಿಟ್ಟಿದ್ದ ಎಂತಹದ್ದೋ ಒಂದು ಗುಳಿಗೆಯನ್ನು ತೆಗೆದುಕೊಂಡು—"ಮಗೂ ನಾನಿನ್ನು ಹೋಗುವೆ. ಈ ಸ್ವಾರ್ಥಮಯ, ಲೋಕದಲ್ಲಿ ಇನ್ನು ನಾನು ಇರಲು ಅಯೋಗ್ಯಳು. ಹೀಗೇಕೆ ನನ್ನ ಕಡೆಗೆ ನೋಡಿ ಅಳುವೆ? ಬೇಡ, ಬೇಡ, ನಿನ್ನ ಈ ಅಳುವು, ಮತ್ತೆ ನನ್ನನ್ನು ತಡೆಯುತ್ತದೆ! ಕಂದಾ ನಾನಾಗಿಯೇ ನಿನ್ನನ್ನು ಹೀಗೆ ಪರದೇಶಿಯನ್ನಾಗಿ ಮಾಡಿ ಸಂತೋಷದಿಂದ ಬಿಟ್ಟುಹೋಗುವೆನೆಂದು ತಿಳಿದೆಯಾ? ಅಲ್ಲ ಮಗೂ, ಅಷ್ಟು ಕಟುಕ ಮನಸ್ಸಿನವಳು ನಾನಲ್ಲ! ಏನು ಮಾಡಲಿ? ಅನಕೂಲ ಸಿಂಧುವನ್ನು ತಮಗಾಗಿಯೂ ಧರ್ಮಸಿಂಧುವನ್ನು ತಮ್ಮಂತಹ ಅಬಲೆಯರಿಗಾಗಿಯೂ ಉಪಯೋಗಿಸಿ ಸ್ವೇಚ್ಛಾಚಾರಿಗಳಾಗಿ, ಇತರರು ತಮ್ಮನ್ನು ಬಲವಾಗಿ ಒದೆಯುತ್ತಿದ್ದರೂ ಬೀಳು ಬೀಳುತ್ತಾ ಕೂಡ, ತಮ್ಮ ಬೆನ್ನುಗಳನ್ನು ತಾವೇ ಚಪ್ಪರಿಸಿಕೊಳ್ಳುತ್ತಲಿರುವ ಕೇವಲ ಸ್ವಾರ್ಥಾಂಧವಾದ ಈ ಲೋಕಸ್ವಭಾವಕ್ಕೆ ಅಳುಕಿ ನಾನು ಈ ಅಲ್ಲದ ಸಾಹಸ ಕಾರ್ಯವನ್ನು ಮಾಡಲೇ ಬೇಕಾಗಿದೆ. ಇನ್ನು ನನಗೆ ವೇಳೆಯಾಯಿತು, ದೇವನು ದಯಾಳುವು. ನಿನ್ನ ಸಂರಕ್ಷಣೆಯ ಭಾರವು ಅವನ ಮೇಲೆ" ಎಂದು ಆ ಗುಳಿಗೆಯನ್ನು ಅವಳು ನುಂಗಿಬಿಟ್ಟಳು. ಹಾಗೆಯೆ, ಓಡುತ್ತಾ, ಹೋಗಿ ಶಿಸುವನ್ನು ಎತ್ತಿಕೊಂಡು ಒಮ್ಮೆ ಮುದ್ದಿಸಿದಳು. ಹೀಗೆ ಎಷ್ಟು ಮುದ್ದಿಸಿದರೂ ಅವಳ ಆಸೆಯು ತೀರಲಿಲ್ಲ. ಮತ್ತೂ ಬಲವಾಗುತ್ತಲಿದ್ದಿತು. ಅವಳು ಗಟ್ಟಿ ಮನಸ್ಸು ಮಾಡಿದಳು, ಆ ಶಿಸುವನ್ನು ಮನೆಯ ಹೊರಗಟ್ಟೆಯ ತುದಿಗೆ ತೀರ ಕ್ಷಿತಿಜದ ತುದಿಗೆ ಒಯ್ದಿಟ್ಟಳು.

ಅವಳು ಶಿಸುವಿನ ಕಡೆಗೆ ಹೊರಳಿ ಒಮ್ಮೆ ಮಾತ್ರ ಮಾತೃದೃಷ್ಟಿಯಿಂದ ನೋಡಿದಳು. ಅವಳ ಅರಿವು ಹಾರಿ ದೊಪ್ಪನೆ ನೆಲಕ್ಕೆ ಬಿದ್ದುಬಿಟ್ಟಳು. ಅವಳ ಆತ್ಮವು ಜಗದಾತ್ಮನಲ್ಲಿ ಅದೃಶ್ಯವಾಯಿತು. ಎಲ್ಲೆಡೆಗೂ ಶಾಂತಿ ಸಾಮ್ರಾಜ್ಯವು ಪಸರಿಸಿತು. ಶಿಸುವು ಮಾತ್ರ ದೀನ ವದನದಿಂದ ತನ್ನ ಮೃತ ಮಾತೆಯ ಕಡೆಗೆ ನೋಡುತ್ತಲಿದ್ದಿತು.

ಅವನಿಗೆ ಈಗ ಅವಳ ನೆನಪಾಯಿತು. ಅವಳನ್ನು ಬದುಕಿಸಲೆಂದೊ, ಪ್ರಣಯ ವಾಸನೆಯು (?) ಮತ್ತೆ ಉದ್ದೀಪವಾಗಿಯೊ, ತಿಳಿಯದು; ಅಲ್ಲಿಗೆ ಓಡುತ್ತಾ ಬಂದನು. ದುಡಿದು ತಂದ ಕೆಲವು ನಾಣ್ಯಗಳಿದ್ದುವು. ಸುಖದ ಭೋಜನವನ್ನು ಇಂದಾದರೂ ಮಾಡಬೇಕೆಂದು ಹಿಗ್ಗಿದನು. ಶಿಸುವು ಮಲಗಿದ ತುದಿಗಟ್ಟೆಯ ಬಳಿಗೆ ಬಂದನು. ಅವನ ಕಣ್ಣುಗಳಿಗೆ, ಮಲಗಿದ ಆ ಶಿಸುವು-ತನ್ನ ಕರ್ಮ ಸಂಭೂತನು ಕಾಣಲಿಲ್ಲ ಹಾಯ್ ಹಾಯ್! ಅವಳನ್ನು ನೋಡ ಬಂದ ಅವನ ಕಾಲು ಶಿಸುವಿನ ಮೇಲೆ ಬಿದ್ದಿತು! ಒಂದೇ ಒಂದು ಬಾರಿ ಚಿಟ್ಟನೆ ಚೀರಿ ಶಿಸುವು ತಾಯಿಯನ್ನು ಹುಡುಕಲೆಂದೊ, ಪರಲೋಕಗತವಾಯಿತು.

ಶಿಸುವಿನ ಚೀರುವಿಕೆಗೆ ಅವನು ಗಾಬರಿಗೊಂಡನು. ಕೆಳಗೆ ನೋಡಿದನು, ಚಿತ್ತವು ತಲ್ಲಣಿಸಿತು. ಮುಖದ ಕಳೆಯು ಬಾಡಿತು, ತನ್ನ ಕೃತಿಗೆ ತಾನೇ ಸಿಟ್ಟುಗೊಂಡನು. ಅವನ ಮುಖವು ಕೆಂಪಗೆ ಕೆಂಡದಂತಾಯಿತು, ಇದೇನು? ಇವನು ಲೋಕವೆಲ್ಲವನ್ನು ನಾಶಿಸಲು ಬರುತ್ತಿರುವ ಕೃತಾಂತನೋ? ಎಂದು ಲೋಕವು ತಲ್ಲಣಿಸಿತು. ಅವನು 'ಕೊಲೆಗಾರ'ನಾದರೂ ಲೋಕವು 'ನಮ್ಮನ್ನು ರಕ್ಷಿಸು, ನಾವು ಶರಣಾಗತರು' ಎಂದು ಮತ್ತೆ ಬೇಡಿಕೊಳ್ಳತೊಡಗಿತು. ಓದುಗರೆ ನೋಡಿದಿರಾ, ಬಡತನಕ್ಕೆ ಹೆದರಿ ಸಂಸಾರವನ್ನು ತ್ಯಜಿಸಿದ ಬಡವನ ಸ್ಥಿತಿಯನ್ನು! ಈ ಲೋಕದ ಈ ಬಗೆಯನ್ನು!

ಇರಲಿ ಇನ್ನು ಈ ಕಥಾನಕದಲ್ಲಿ ಬಂದಿರುವ ಪ್ರಮುಖ ಪಾತ್ರಗಳ ಹೆಸರುಗಳನ್ನು ಹೇಳಿರಿ ನೋಡೋಣ? 'ಏನು, ನಾವರಿಯೆವು' ಎನ್ನುವಿರಾ? ಹಾಗಾದರೆ ನಿಮಗಾಗಿ ನಾವು ಹೇಳುವೆವು, ಮಾತ್ರ ನೀವು ಇನ್ನೊಬ್ಬರಿಗೆ ಹೇಳಕೂಡದು. ಅದೇಕೆಂದರೆ ನಾವು ಅವರಿಗೆ ಹಾಗೆ ಆಣೆಯಿಟ್ಟು ವಚನ ಕೊಟ್ಟಿರುವೆವು. ಇಲ್ಲದಿದ್ದರೆ ನಮಗೆ ನಮ್ಮ ಕೊರಳಾಣೆ! ಕೇಳಿ—ಅವನು ದಿನಕರ—ಅವಳು ರಜನಿ—ಶಿಸುವು ನಿಶಿ.

+—+—+—+

(೪ನೇ ಪುಟದಿಂದ ಮುಂದುವರಿದುದು.)

ಸಂಯೋಗವು ಮಾನವ ಗೆಳೆತನವಲ್ಲ. ಇವರೆಲ್ಲ ಭಾವಗಳ ಕೊಲೆಗಡಕರು. ಇಂದು ನೂರಾರು ಸುಂದರಿಯರು, ತಮ್ಮನ್ನು ಅಲಂಕರಿಸಿಕೊಂಡು ಪರರನ್ನು ಆಕರ್ಷಿಸುತ್ತ, ಕುಳಿತಿರುವರು. ಯಾರಾದರೂ ಅವರನ್ನು ಕಂಡು ಬೆರಗಾಗಿ, ತಮ್ಮ ಮನೆಗೆ ಒಯ್ಯುವರು. ಇದೇ ವಿವಾಹ. ಇಂಥ ಸೌಂದರ್ಯ ಬಯಸುವ ದಂಪತಿಗಳ ಜೀವನವು ನಷ್ಟವೇ ಸರಿ. ಅವರು ಸಮೀಪವಾಗಲು, ಆ ಪರಸ್ಪರ ಸ್ವಾರ್ಥಗಳು ತಿಳಿದು ಅವರ ಭ್ರಾಂತು ಬಯಲಾಗುವುದು.

ಪರರು ತಮ್ಮನ್ನು ಕೊಂಡಾಡಲಿ-ಎಂದು ಮಾಡುವ ಸೌಂದರ್ಯವು ಅಹಂಕಾರ, ಆತ್ಮಪ್ರಶಂಸೆಗಳ ಮೂಲವು; ಇದರಿಂದ ಪ್ರೇಮ, ಆನಂದಗಳ ಸಮಾಧಿಯೇ ಆಗುವುದು. ಅದು ಪೈಶಾಚಿಕ ವೃತ್ತಿ. ಅದೇ ಮರಣ ಸಮಾನ ಹಣ, ಅಧಿಕಾರಿಗಳಿಂದ ದೊರೆಯುವ ಈ ಸೌಂದರ್ಯ ಲಾಲಸೆಯು ಪ್ರೇಮದ ವೈರಿಯು. ಇಂದು ತೀರ ಬಡವರೂ ಸಹ ಇದನ್ನು ಹಿಂಬಾಲಿಸುತ್ತಿರುವುದನ್ನು ಕಂಡರೆ ವ್ಯಥೆಯಾಗುವುದು. [ಸ್ವ]

(೧೦ನೇ ಪುಟದಿಂದ ಮುಂದುವರಿದುದು.)

ಒಂಭತ್ತು ಗಂಟೆಯು ಹೊಡೆಯಿತು. ಮೇಲಕ್ಕೆದ್ದೆನು; ಕೂಡಲೇ "ಎದ್ದು ಮಾಡುದೇನು? ಹೀಗೆಯೇ ಪ್ರಾಯೋಪವೇಶಮಾಡಿ ಬಿಡೋಣ" ಎಂದು ಪುನಃ ಮಲಗಿದೆನು. ಅಷ್ಟು ಹೊತ್ತಿಗೆ ಯಾರೋ ಬಾಗಿಲು ತಟ್ಟಿದರು. ಗೌರಿಯು ಎದ್ದು ಹೋಗಿ ಬಾಗಿಲನ್ನು ತೆರೆದಳು, ಬಂದಿದ್ದವನು "ರಾಯರಿಲ್ಲವೇ ತಾಯಿ?" ಎಂದು ಕೇಳಿದನು. ನಾನು ಯಾವನೋ ಹಳೆಯ ಸಾಲಗಾರನು ಬಂದಿರಬೇಕೆಂದುಕೊಂಡು, ಮುಸುಕು ಹಾಕಿಕೊಂಡೆನು; ಗೌರಿಯು "ರಾಯರೇಕೆ"? ಎಂದು ಕೇಳಿದಳು, ಅದಕ್ಕವನು "ಮನಿಯಾರ್ಡರ್ ಬಂದಿದೆ"ಯೆಂದನು. ನನ್ನ ಕಿವಿಯು ನೆಟ್ಟಗಾಯಿತು! ಎದ್ದು ಬಾಗಿಲ ಬಳಿ ಹೋದೆನು. ಅವನು ನೂರು ರೂಪಾಯಿಗಳನ್ನೂ ಒಂದು ಲಕ್ಕೋಟೆಯನ್ನೂ ಕೊಟ್ಟು ರುಜುವನ್ನು ಹಾಕಿಸಿಕೊಂಡು ಹೊರಟು ಹೋದನು. ಲಕ್ಕೋಟೆಯನ್ನು ಒಡೆದು ಓದಿದೆನು. ಅದರಲ್ಲಿ ನಮ್ಮ ಬ್ಯಾಂಕಿನ ಸೆಕ್ರಿಟರಿಗಳು ನಾನು ನಿರಪರಾಧಿಯೆಂದು ತೀರ್ಮಾನವಾಯಿತೆಂದೂ, ನನಗೆ ಹತ್ತು ರೂಪಾಯಿ ಹೆಚ್ಚಿಗೆ ಕೊಡುವುದಾಗಿಯೂ, ಮತ್ತು ಕೆಲಸದಿಂದ ವಜಾ ಮಾಡಿದ ದಿನದಿಂದ ಅದು ವರೆಗಾದ ಸಂಬಳವನ್ನು ಕಳುಹಿಸಿರುತ್ತೇನೆಂದೂ ಬರೆದಿದ್ದರು. ವಿಚಾರಿಸದೆ ಅಪಮಾನವನ್ನುಂಟು ಮಾಡಿದುದಕ್ಕಾಗಿ ಬಹಳ ಪಶ್ಚಾತ್ತಾಪಗೊಂಡಿದ್ದರು. ವಿಚಾರವನ್ನು ಕೇಳಿ ಗೌರಿಯು ಸಂತೋಷದಿಂದ, "ಮೈಸೂರಿಗೆ ಯಾವಾಗ ಹೋಗೋಣ" ಎಂದು ಕೇಳಿದಳು. ನಾನು "ಮುಂದಿನ ತಿಂಗಳು" ಎಂದೆನು.

## ಸ್ವೀಕಾರ.

ಮಂಗಳೂರಿನ ದಿ ಪೊಪ್ಯುಲರ್ ಇನ್ಶ್ಯೂರೆನ್ಸ್ ಕಂಪೆನಿ ಲಿಮಿಟೆಡ್; ದಿ ಕೆನರಾ ಸ್ವದೇಶಿ ಸ್ಟೋರ್ಸ್, ದೇಶಬಂಧು ಹೇಯರ್ ಕಟ್ಟಿಂಗ್ ಸೆಲೂನ್ ಮತ್ತು ದಿ ಕೆನರಾ ಸ್ನಫ್ ವರ್ಕ್ಸ್ ಇವರು ಪ್ರೀತಿಯಿಂದ ನಮಗೆ ಒಂದೊಂದು ಅಂದವಾದ ಕೆಲೆಂಡರನ್ನು ಕಳುಹಿಸಿ ಕೊಟ್ಟಿರುವರು. ಸಂತೋಷದಿಂದ ಸ್ವೀಕರಿಸಿ ಧನ್ಯವಾದಗಳನ್ನರ್ಪಿಸಿ ಇವರ ವ್ಯಾಪಾರವು ದಿನೆ ದಿನೇ ಅಭಿವೃದ್ಧಿಗೊಳ್ಳಲೆಂದು ಹಾರೈಸುತ್ತೇವೆ.

ಸಂ. ಬ. ಬ.

"ಗೀತಾಗ್ರಂಥ ಸ್ಪರ್ಧೆ"ಯೊಂದನ್ನಿಟ್ಟಿದ್ದೆವಷ್ಟೆ! ಉತ್ತಮ ಲೇಖನಗಳ ಅಭಾವದಿಂದ ಅದನ್ನು ಮುಂದರಿಸಿಡಲಾಗಿದೆ.

ಸಂಪಾದಕ ಬ. ಬ

# ವಿಚಿತ್ರಮಯ ಪ್ರಪಂಚ.

೨೫ ವರ್ಷದ ಓರ್ವ ತರುಣಿ; ಮುಂಬಾಯಿ ಪಟ್ಟಣ ವಾಸಿ. ಅನುನಿತ್ಯವೂ ಶಂಕರನೆಂಬ ಕುಳ್ಳ ದಪ್ಪ ಮನುಷ್ಯನೊಬ್ಬನು ಕನಸಿನಲ್ಲಿ ಬಂದು ಅವಳನ್ನು ಮದುವೆಗೆ ಒತ್ತಾಯಪಡಿಸುವಂತಾಗುತ್ತಿತ್ತು. ಈ ಕನಸಿನ ಶಂಕರನನ್ನು ಅವಳೆಂದೂ ನೋಡಿದುದಿಲ್ಲ. ಈ ಕನಸಿನ ವರನನ್ನೇ ವರಿಸುವ ಭ್ರಾಂತಿಯಿಂದ ಈ ತರುಣಿಯು ಅತ್ಮಹತ್ಯೆ ಮಾಡಿಕೊಳ್ಳುವ ನಿರ್ಧಾರಮಾಡಿದಳು. ಜಿ. ಐ. ಪಿ. ಇಲೆಕ್ಟ್ರಿಕ್ ರೈಲ್ವೇ ಕಂಬಿಗಳ ನಡುವೆ ಅಡ್ಡ ಮಲಗಿಬಿಟ್ಟಳು. ಆದರೆ ಸುದೈವವಶಾತ್ ಡ್ರ್ಯಾವರನು ಟ್ರೈನನ್ನು ನಿಲ್ಲಿಸಿ ಬಿಟ್ಟ! ತರುಣಿಯ ಪ್ರಾಣ ಉಳಿಯಿತು. ಈಗ ಆತ್ಮಹತ್ಯೆ ಮಾಡಲೆತ್ನಿಸಿದ ಆರೋಪದಿಂದ ಇವಳ ಮೇಲೆ ಖಟ್ಲೆ ನಡೆದಿದೆ.

ಕಲ್ಕತ್ತ ಮೆಜಿಸ್ಟ್ರೇಟರಲ್ಲಿ ನೇಪಾಲ ಸಿಕ್ದಾರನೆಂಬವನೊಬ್ಬನ ಫಿರ್ಯಾದಿ. ಜ್ಞಾನಬಾಬು ಎಂಬ ತನ್ನ ಶ್ರೀಮಂತ ಜಮೀನುದಾರ ಅಳಿಯನನ್ನು ರಾಣಿಭಾಲಳೆಂಬ ನಾಟಗಾರ್ತಿ ಸ್ತ್ರೀಯೊಬ್ಬಳು ವಶದಲ್ಲಿಟ್ಟುಕೊಂಡಿರುವಳು. ಮದ್ದು ಮತ್ತು ಮಾಟದಿಂದ ಜ್ಞಾನಬಾಬುವನ್ನು ಅವಳು ವಶಮಾಡಿಕೊಂಡು ತನ್ನ ಕೋಣೆಯೊಂದರಲ್ಲಿ ಗುಪ್ತವಾಗಿರಿಸಿಕೊಂಡಿರುವಳು. ಅವನ ಆಭರಣ ಮತ್ತು ಹಣವನ್ನು ಸುಲಿಯಬೇಕೆಂದೇ ಈ ತಂತ್ರ ನಡೆದಿದೆ. ಜ್ಞಾನಬಾಬುವು ನಿಸ್ಸಹಾಯಕನಾಗಿ ರಾಣಿಭಾಳಲ ಮನೆಯಲ್ಲಿ ಕೊಳೆಯುತ್ತಿರುವನು. ಒಮ್ಮೆ ತಾನು ಅವನನ್ನು ಔಷಧೋಪಚಾರಕ್ಕಾಗಿ ಕರದೊಯ್ಯಲೆತ್ನಿಸಿದಾಗ ರಾಣಿಭಾಲಳೂ ಆವಳ ಜನರೂ ತಡೆದು ತನಗೆ ಪ್ರಾಣಾಪಾಯದ ಬೆದರಿಕೆ ಹಾಕಿದರೆಂದೇ ನೇಪಾಲ ಸಿಕ್ದಾರನ ಆರೋಪ. ಜ್ಞಾನಬಾಬುವನ್ನು ಕೋರ್ಟಿನ ಮುಂದೆ ಹಾಜರುಪಡಿಸಲು ವಾರಾಂಟು ಹೊರಟಿರುವುದು.

ಬಂಗಾಳದ ವೀರೇಂದ್ರಕುಮಾರಪಾಲನು ಕೊಲೇಜು ಶಿಕ್ಷಣ ಪಡೆದ ತರುಣ. ಅವನ ಆರೋಗ್ಯವು ಕೆಡುತ್ತಾ ಹೋದಾಗ ತನ್ನ ಕುಟುಂಬಿಕರಾರೋ ತನಗೆ ಮಾಟ ಮಾಡಿರುವರೆಂಬ ಸಂದೇಹದಿಂದ ತಲ್ಲಣಿಸತೊಡಗಿದನು. ಈ ಮಾಟವನ್ನು ತೆಗೆಯಲು, ಪ್ರಸಿದ್ಧ ಮಂತ್ರಗಾರನೆನಿಸಲ್ಪಟ್ಟ ಸಮುಗಾರನೊಬ್ಬನನ್ನು ಆಶ್ರೈಸಿದನು. ಇವನು ಪ್ರಥಮವಾಗಿ ಭೇದಿಯಾಗಿ ಹೋಗಲು ಒಂದು ಮದ್ದನ್ನಿತ್ತನು. ಅದರ ಒಂದು 'ಡೋಸು' ಕುಡಿದಾಗಲೇ ವೀರೇಂದ್ರನ ಬಲವೆಲ್ಲ ಕುಂದಿಹೋಯಿತು. ಅದರೂ ಅವನು ಎರಡನೇ 'ಡೋಸು' ತೆಗೆದುಕೊಂಡ—ಅದರಿಂದಲೇ ಕಣ್ಣು ಮುಚ್ಚಿದ!

ಕಾಶೀನಾಥ ಪುರದ ಮಹಾಮಾಯಳೆಂಬ ಕುಟುಂಬವಿಲ್ಲದ ಶ್ರೀಮಂತ ವಿಧವೆಯು ಬಹಳ ದೈವಭಕ್ತಿಪರಾಯಣಳು. ರಾಧಾಕೃಷ್ಣ ದೇವಸ್ಥಾನವೊಂದನ್ನು ಕಟ್ಟಿಸಿ ಅದಕ್ಕೆ ಮನ್ಮಥನಾಥನೆಂಬವನನ್ನು ಅರ್ಚಕನಾಗಿ ನೇಮಿಸಿದಳು. ಮತ್ತು ತನ್ನ ಆಸ್ತಿಯನ್ನೆಲ್ಲಾ ದೇವಸ್ಥಾನಕ್ಕೇನೇ ಕೊಟ್ಟು ಅದಕ್ಕೂ ದೇವಸ್ಥಾನಕ್ಕೂ ಮನ್ಮಥನಾಥನೇ ಹಕ್ಕುದಾರನೆಂದು ಇತ್ತಲಾಗಿ ವೀಲು ಮಾಡಿಟ್ಟಿದ್ದಳು. ಆದರೆ ೭೦ ವರ್ಷದ ಮುದುಕಿಯಾಗಿದ್ದರೂ ಮಹಾಮಾಯೆಯು ಮತ್ತೂ ಮತ್ತೂ ಸಶಕ್ತಳಾಗಿಕೊಂಡೇ ಬರುತ್ತಿದ್ದುದು ಮನ್ಮಥನಾಥನಿಗೆ ಅಸಹನೀಯವಾಯಿತು. ಅವನು ಆಸ್ತಿಯನ್ನೆಲ್ಲಾ ಬೇಗನೆ ಅನುಭವಿಸುವಂತಾಗಬೇಕೆಂಬ ಆತ್ಯೋನ್ನತ್ತಿಯಿಂದ, ಮಹಾಮಾಯೆಯು ಒಂದು ದಿನ ದನವೊಂದರ ಮೈದಡವುತ್ತಿದ್ದಾಗ ಹಿಂದಿನಿಂದ ಬಂದು ತಿವಿದನು. ಮಹಾಮಾಯೆಯು ಆಸ್ಪತ್ರೆಗೊಯ್ಯಲ್ಪಟ್ಟು ೨ ತಿಂಗಳ ಚಿಕಿತ್ಸೆಯ ನಂತರ ನೆಟ್ಟಗಾದಳು. ಮನ್ಮಥನಾಥನ ಮೇಲೆ ಸೆಶನ್ಸ್ ಖಟ್ಲೆ ನಡೆದಿದೆ.

ಸಲೊನೀಕದಲ್ಲಿ ಮಿಲ್ಯಾಧಿಪತಿಯೊಬ್ಬನು ಆದರ್ಶಪತಿಯಾಗಿ ಹೆಂಡತಿ ಮಕ್ಕಳೊಂದಿಗೆ ಸುಖವಾಗಿದ್ದನು. ಒಮ್ಮೆ ಲೀಲಾ ಸಲೆವಿಚ್ಚಳೆಂಬ ೧೮ ವರ್ಷದ ತರುಣಿಯ ದರ್ಶನವಾಯಿತು. ಅಂದಿನಿಂದ ಅವನು ಅವಳ ಬಲೆಗೊಳಗಾದನು. ಅನೇಕರನ್ನು ತನ್ನ ದಾಸರನ್ನಾಗಿ ಮಾಡಿದ್ದ ನಾಟಗಾರ್ತಿಯಾದ ಲೀಲಳನ ದಾಸನಾಗಿ ಹೋಗಿ ಅವಳೊಂದಿಗೇ ವಿಲಾಸದಲ್ಲಿ ಮಗ್ನನಾದನು. ಅದರಿಂದ ಅವನ ಹೆಂಡತಿಯು ಬಹಳ ಚಿಂತೆಗೀಡಾದಳು. ಇದನ್ನು ತಿಳಿದ ೧೬ ವರ್ಷದ ಪುತ್ರನು ತಾಯಿಯ ದುಃಖವನ್ನು ಕಂಡು ಸಂತಪ್ತನಾಗಿ, ನಾಟಗಾರ್ತಿಯಾದ ಲೀಲಳನ್ನು ಬಿಟ್ಟುಬಿಡಬೇಕೆಂದು ತಂದೆಯ ಕಾಲಿಗೆ ಬಿದ್ದು ನಾನಾ ಪರಿ ಬೇಡಿಕೊಂಡನು. ತಂದೆಯು ನಿರಾಕರಿಸಿದುದು ಮಾತ್ರವಲ್ಲದೆ ಹುಡುಗನ ಕೆನ್ನೆಗೊಂದೇಟು ಹೊಡೆದುಬಿಟ್ಟನು. ಅಷ್ಟರಲ್ಲಿ ಹುಡುಗನು ತನ್ನ ಚಲ್ಲಣದೊಳಗಿಂದ ಕಟಾರಿಯೊಂದನ್ನು ಹೊರಕ್ಕೆಳೆದು ತಂದೆಯ ಹೃದಯಕ್ಕೆ ಇರಿದನು, ತಂದೆಯು ತನ್ನ ಕೊಲೆಗಾರನು ತನ್ನ ಮಗನೇ ಎಂದು ಪೋಲೀಸರಿಗೆ ತಿಳಿಸುವನಕ ಬದುಕಿ ನಂತರ ಆಸ್ಪತ್ರೆಯಲ್ಲಿ ಮೃತನಾದನು.

ಏನೂ ರಕ್ತ ಬಾರದಂತೆ ವಿಚಿತ್ರ ಶಸ್ತ್ರಗಳಿಂದ ಒಪರೇಶನು ಮಾಡುವ ಪ್ರಯೋಗಗಳು ಲಂಡನ್ ಆಸ್ಪತ್ರೆಯಲ್ಲಿ ನಡೆಸಲ್ಪಡುವುವು. ರಕ್ತ ಬಾರದಂತೆಯೇ ಮಾಂಸವನ್ನು ಕತ್ತರಿಸುವ ವಿದ್ಯುಚ್ಛಕ್ತಿಯಿಂದ ಹದವಾದ ಚೂರಿಯೊಂದು ಈಗ ತಯಾರಿಸಲ್ಪಟ್ಟಿದೆ. ಇದರಿಂದ ಮಿದುಳಿನಲ್ಲಿಯೂ, ರಕ್ತ ಪ್ರವಾಹದ ಹಾನಿಯು ಯಾವ ಬೆದರಿಕೆಯೂ ಇಲ್ಲದೆ ಒಪರೇಶನ್ ನಡೆಸಬಹುದಾಗಿರುವುದು. ಪಕ್ಷಪಾತ ರೋಗ ಪೀಡಿತನಾಗಿದ್ದು ಚಲಿಸಲಾರದ ರೋಗಿಯೊಬ್ಬನ ಮೇಲೆ ಈ ಚೂರಿಯಿಂದ ಒಪರೇಶನ್ ನಡೆಸಿದಾಗ ಅವನು ಕೆಲವೇ ದಿನಗಳಲ್ಲಿ ಸೌಖ್ಯವಾಗಿ ಆಸ್ಪತ್ರೆಯಿಂದ ನಡೆದು ಹೋದನು. ಒಬ್ಬ ಅಧ್ಯಾಪಕನ ಮೆದುಳಿನಲ್ಲೊಂದು ಬಾವುವಿದ್ದಿತು. ಅದರಿಂದ ಅವನ ದೃಷ್ಟಿ ಮಂದವಾಗುತ್ತಿದ್ದಿತು. ೫ ಮಂದಿ ಸರ್ಜನರು ಇವನ ಮೆದುಳಿನ ಒಪರೇಶನ್ ಮಾಡಿದರು. ಅವನಿಗೀಗ ಸರಿ ದೃಷ್ಟಿ ತೋರುತ್ತಿರುವುದು. ಒಪರೇಶನ್ ಮಾಡುವಾಗ ರಕ್ತವೇನೂ ಬರಲಿಲ್ಲ. ಮೆದುಳಿನೊಳಗೊಂದು ಬಾವಿದ್ದ ಸ್ತ್ರೀಯೊಬ್ಬಳು ಸಾಯುವುದೇ ನಿಶ್ಚಯವೆಂದಿದ್ದು ೭ ಗಂಟೆಗಳ ವರೆಗಿನ ಒಪರೇಶನಿನ ನಂತರ ಬದುಕಿದಳು.

ಮ್ಯೂನಿಚ್ ಎಂಬಲ್ಲಿ ಒಬ್ಬ ಕಳ್ಳನು, ಹೊಟೆಲಿಗೆ ಬಂದವರ ಆಭರಣ ಮೊದಲಾದ ಸೊತ್ತುಗಳನ್ನು ಕಳವು ಮಾಡಿ ಜೀವಿಸುತ್ತಿದ್ದನು. ನಂತರ ಅವನು ಬೇರೆ ವೃತ್ತಿ ಕೈಕೊಂಡು ಶ್ರೀಮಂತನಾದನು. ತಾನು ಕದ್ದು ತಂದಿದ್ದ ಸೊತ್ತುಗಳ ಪಟ್ಟಿಯೊಂದನ್ನಿಟ್ಟುಕೊಂಡಿದ್ದು ಅವನೀಗ ಅವುಗಳ ಬೆಲೆಯನ್ನು ಸಂಬಂಧಪಟ್ಟವರಿಗೆ ಕೊಟ್ಟಿರುವನು. ಮ್ಯೂನಿಚ್‌ನಲ್ಲೊಬ್ಬನಿಗೆ ೩೦೦ ಪವನು ಕೊಟ್ಟಿರುವನು. ಇದೇ ರೀತಿ ತಾನು ಯಾರ್ಯಾರ ಸಾಮಾನುಗಳನ್ನೆಲ್ಲಾ ಕದ್ದಿರುವನೋ ಅವುಗಳ ಬೆಲೆಯನ್ನೆಲ್ಲಾ ಅದರದರ ಮ್ಹಾಲಿಕರಿಗೊಪ್ಪಿಸಿರುವನು. ಆದರೆ ಓರ್ವ ಆಂಗ್ಲೇಯ ಸ್ತ್ರೀಗೆ ಸಲ್ಲಬೇಕಾದುದನ್ನು ಮಾತ್ರ ಅವನಿಗೆ ಇಷ್ಟರ ವರೆಗೆ ಮುಟ್ಟಿಸಲಾಗಲಿಲ್ಲ. ಈಗ ಸ್ತ್ರೀಯನ್ನು ಆತುರದಿಂದ ಹುಡುಕುತ್ತಿರುವನು. ಅವಳು ಸಿಕ್ಕಿದರೆ ಅವಳಿಗೆ ೧೦,೦೦೦ ಪವನುಗಳ ಚೆಕ್ ಕಳುಹಿಸಲಿರುವನು.

---

# ನೀವು ಬಲ್ಲಿರಾ?

### ಹೇಗಿದ್ದವರು ಹೇಗಾದರು!!

**ವಿದ್ಯೆಯಿಲ್ಲದೆ ಗತ್ಯಂತರವಿಲ್ಲವೆ?**

೧ ಮಿ. ರಾಮ್ಸೆ ಮೆಕ್ಡೊನಾಲ್ಡ್ ಮೊದಲು ತೋಟದ ಕೂಲಿ; ಈಗ ಚಕ್ರಾಧಿಪತ್ಯದ ಮುಖ್ಯ ಮಂತ್ರಿ.

೨ ಸಿ. ಮುಸೊಲಿನಿ ಮೊದಲು ಭಿಕ್ಷುಕ; ಈಗ ಇಟಲಿಯ (ಮುಕುಟ ರಹಿತ) ಚಕ್ರವರ್ತಿ.

೩. ಪ್ರೆ ಹೂವರ್ ಮೊದಲು ಕುದುರೆ ಲಾಯದ ಕೂಲಿ; ಈಗ ಅಮೇರಿಕಾದ ಅಧ್ಯಕ್ಷ.

೪ ಬೆಂಜಮಿನ್ ಫ್ರಾಂಕ್ಲಿನ್ ಮೊದಲು ಕಂಪೋಜಿಟರ್; ಈಗ ಜಗತ್ತಿನ ಮಹಾಶಾಸ್ತ್ರಜ್ಞ.

೫ ಆಂಡ್ರೂ ಕಾರ್ನೆಗಿ ಮೊದಲು ತಂತಿ ಇಲಾಖೆ ಜವಾನ; ಈಗ ಕೋಟ್ಯಾಧೀಶ್ವರ.

೬ ಕೇಶವ ಚಂದ್ರಸೇನರ ಪಿತಾಮಹರು ಮೊದಲು ಎಂಟು ರೂಪಾಯಿ ಕಂಪೋಜಿಟರ್ ಈಗ 'ಬ್ಯಾಂಕ್ ಆಫ್ ಬಂಗಾಳ'ನ ಗವರ್ನರರು.

**[ಮೇಲಿನವರೊಬ್ಬರಿಗೂ ವಿಶ್ವವಿದ್ಯಾಲಯದ ಸ್ಟಾಂಪುಗಳಿಲ್ಲ]**

ಹಾಸ್ಯವನ್ನು ಅವಸರದಿಂದ ಓದುವುದಲ್ಲ. ಅದರಲ್ಲಿನ ಶಬ್ದಾರ್ಥದಲ್ಲಡಗಿರುವ ಹಾಸ್ಯರಸವನ್ನು ಹೀರಬೇಕು

# ಬಡವರ ಬಂಧು ಹಾಸ್ಯೌಷಧಾಲಯ.

ಹಾಸ್ಯಸಂಗ್ರಹಕಾರರು ಬೇಕಾಗಿದ್ದಾರೆ. ಉತ್ತಮ ಹಾಸ್ಯಗಳಿಗೆ "ಸುಸ್ವಾಗತ" ವಿದೆ.

ಡಾಕ್ಟರರು:

**ರೋಗವಿಲ್ಲದ ನಾಗಣ್ಣ,** S. S. L. C. F. A. I. L. E. D.

**ಅತೀ ಅಗ್ಗ!** ಮನೋರೋಗಕ್ಕೆ ಕೆಳಗಿನವು ದಿವ್ಯೌಷಧ. **ನಗುವವರಿಗೆ ಧರ್ಮ!**

ಅವಳು–ನಿನ್ನ ಗಂಡ ನಿನಗೆ ಕ್ರಿಸ್‌ಮಸ್ ದಿನ ಏನು ಕೊಟ್ಟ?

ಇವಳು–ಮುತ್ತಿನ ಸರ ಕೊಟ್ಟ.

ಇವಳು-ನಿನ್ನ ಗಂಡ ನಿನಗೇನು ಕೊಟ್ಟ?

ಅವಳು–ಬರೀ ಮುತ್ತು ಕೊಟ್ಟ!

+ + + †

ವೈದ್ಯ– ಗೋವಿಂದರಾಯರೇ, ಒಮ್ಮೆ ಕೆಮ್ಮಿ ತೋರಿಸಿರಿ.

ಗೋವಿಂದರಾಯರು–ಕೆಮ್ಮಲಿಕ್ಕೆ ತ್ರಾಣವಿಲ್ಲ.

ವೈದ್ಯ–ಹಾಗಾದರೆ ನಾನೇನು ಮಾಡಲಿ?

ಗೋವಿಂದರಾಯ – ಲೋ, ವೆಂಕಟೇಶ ನಾನು ಈ ಬೆಳಿಗ್ಗೆ ಕೆಮ್ಮಿದೆನಲ್ಲಾ, ಅದನ್ನು ವೈದ್ಯರಿಗೆ ಕೆಮ್ಮಿ ತೋರಿಸೋ.

ಶ್ರೀ ಮಂಜುನಾಥ ಬಿ. ಅಮೀನ್, ಮುಂಬಾಯಿ.

+ + + +

ಜಡ್ಜ್–ನೀನು ಗಡಿಯಾರನ್ನು ಯಾಕೆ ಕಳವು ಮಾಡಿದಿ? ನಿಜ ಕಾರಣವನ್ನು ತಿಳಿಸಿದರೆ ನಿನ್ನನ್ನು ಬಿಟ್ಟುಬಿಡುತ್ತೇನೆ.

ಕಳ್ಳ– (ಸಂತೋಷದಿಂದ) ಹೊತ್ತು ತಿಳಿಯ ಬೇಕೆಂದು!

+ + + +

ಗ್ರಹಸ್ಥ– ರಾಯರೇ, ನೀವು ಈ ಪುಸ್ತಕವನ್ನು ಈಗ ತಾನೇ ಹೊಸತಾಗಿ ಛಾಪಿಸಲಾಯಿತೆಂದು ಹೇಳಲಿಲ್ಲವೇ? ಆದರೆ, ಇದೇನು ದ್ವಿತೀಯ ಮುದ್ರಣವೆಂದಿದೆ!

ಗ್ರಂಥಕರ್ತ:–ಹೌದು, ಏಕೆಂದರೆ ನನ್ನ ಹಸ್ತ ಪ್ರತಿಯೇ ಮೊದಲನೆಯ ಮುದ್ರಣವೆಂದು ನನ್ನ ಭಾವನೆ.

ಗ್ರಹಸ್ಥ–ಅದು ಹೇಗಾದೀತು? ಹಸ್ತ ಪ್ರತಿಯು ಮುದ್ರಣವೆನಿಸಿಕೊಳ್ಳುತ್ತದೆಯೇ?

ಗ್ರಂಥಕರ್ತ–ಹಾಗಾದರೆ, ಇಂದಿನ ಕೆಲವರು ಲೇಖಕರು ಮಾಡುತ್ತಿರುವಂತೆ ರಕ್ಷಾಪತ್ರವನ್ನು ಬದಲಿಸಿದ ಮಾತ್ರಕ್ಕೆ ಗ್ರಂಥವನ್ನು ಪುನರ್ಮುದ್ರಿತವೆಂದು ಹೇಳಬಹುದೇ?

+ + + +

ಒಬ್ಬ–ನೀನು ಈಗ ಯಾವ ಉದ್ಯೋಗವನ್ನು ಮಾಡುತ್ತಿರುವಿ?

ಇನ್ನೊಬ್ಬ–ಕೆಲಸವನ್ನು ಹುಡುಕುವುದು.

+ + + +

ಗುರು–ಗುರುವಿನ ಗುರುವನ್ನು ಏನೆಂದು ಹೇಳುತ್ತಾರೆ?

ಶಿಷ್ಯ–ಗುಗ್ಗುರು (Weevil) ಸ್ವಾಮಿ!

+ + + +

ಸೆರೆಮನೆಯನ್ನು ನೋಡಲು ಬಂದ ವೃದ್ಧ ಸಾಹುಕಾರನು, ಅಲ್ಲಿ ಒಬ್ಬ ಕೈದಿಯನ್ನು ನೋಡಿ ಕನಿಕರದಿಂದ, 'ನೀನು ಯಾಕಪ್ಪಾ ಇಲ್ಲಿ ಇದ್ದಿಯೇ?' ಎಂದು ಕೇಳಿದನು.

ಕೈದಿ—ಏನು ಮಾಡಲಿ ಸ್ವಾಮಿ, ನನ್ನ ತಪ್ಪಲ್ಲ. ಸರಕಾರ ಅನ್ಯಾಯ ಮಾಡಿದೆ.

ಸಾಹುಕಾರ–ಹಾಗೆಯೇ! ಅದು ಹೇಗೆ?

ಕೈದಿ–ನೋಡಿ, ಈ ಜೈಲಿನ ಗೋಡೆಯನ್ನು ಕಲ್ಲಿನಿಂದ ಕಟ್ಟಿದ್ದಾರೆ. ಕಿಟಿಕಿ ಸರಳನ್ನು ದಪ್ಪವಾಗಿ ಇಟ್ಟಿದ್ದಾರೆ. ಬಾಗಿಲಿನ ಕಾವಲುಗಾರನ ಕೈಯಲ್ಲಿ ಬಂದೂಕ ಕೊಟ್ಟಿದ್ದಾರೆ.

+ + + +

ರಾಯರು– (ನ್ಯಾಯಾಧೀಶರ ಬಳಿ) ಮಹಾಸ್ವಾಮಿ, ಇವನೇ ನಮ್ಮ ಒಡವೆಗಳನ್ನು ಕದ್ದವನು—ಎಂದರು.

ಕಳ್ಳ–ಸುಳ್ಳು, ಮಹಾಸ್ವಾಮಿ, ಇವನು ಖಂಡಿತವಾಗಿಯೂ ನಾನು ಕದ್ದದನ್ನು ನೋಡಿರಲಿಲ್ಲ. ಆಗ ಇವನು ನಿದ್ರೆ ಮಾಡುತ್ತಿದ್ದ.

+ + + +

ರೋಗಿ– ಡಾಕ್ಟರೇ, ಯಾಕೊ ಗಂಟಲು ಸ್ವಲ್ಪ ಕಟ್ಟಿಕೊಂಡಿದೆ. ಏನಾದರೂ ಔಷಧಿ ಕೊಟ್ಟು ರಿಪೇರಿ ಮಾಡುತ್ತೀರಾ?

ಡಾಕ್ಟರ್–ಆಗಬಹುದು! ಛಾರ್ಜು ಹತ್ತು ರೂಪಾಯಿ ಆಗುತ್ತದೆ.

ರೋಗಿ–ಅಬ್ಬಾ! ಗಂಟಲೊಂದನ್ನು ಸರಿಪಡಿಸಲಿಕ್ಕೆ ಹತ್ತು ರೂಪಾಯಿಯೆ! ಕಳೆದ ನನ ರಾತ್ರಿ ನನ್ನ ಇಡೀ ಮನೆಯನ್ನೇ ರಿಪೇರಿ ಮಾಡಿಸಿದರೂ ೮ ರೂಪ್ಯಾಗೆ ಮೀರಲಿಲ್ಲವಲ್ಲಾ!

+ + + +

ಮಗ–ನಾನು ಅಂಜುಬುರುಕನಂತೆ! ನೋಡಮ್ಮ ನಿನ್ನೆ ದಿನ ಹುಲಿ ಸಿಂಹಗಳೆದುರಿಗೆ ಕುಳಿತ್ತಿದ್ದೆ.

ತಾಯಿ–ಎಲ್ಲಿ ಮಗು?

ಮಗ–ಸರ್ಕಸಿನಲ್ಲಿ!

+ + + +

ರಾಮು—ಈ ಹರಕು ಅಂಗಿಯನ್ನು ಹಾಕಿಕೊಂಡು ಬೀದಿ ಬೀದಿ ತಿರುಗಲು ನಿನಗೆ ನಾಚಿಕೆಯಾಗುವುದಿಲ್ಲವೇ?

ಶಾಮು–ಇಲ್ಲ! ನಾಚಿಕೆಯೇಕೆ? ಈ ಅಂಗಿ ನನ್ನದಲ್ಲ!

+ + + +

ತನ್ನ ಬೋಧನ ಸಾಮರ್ಥ್ಯಕ್ಕಾಗಿ ಹೆಚ್ಚಳಪಡುತ್ತಿದ್ದ ಉಪಾಧ್ಯಾಯ:–ನೋಡಿ, ನಮ್ಮ ಶಿಷ್ಯ–ಮುಂಡೇಗಂಡ, ಬಲು ಬುದ್ಧಿವಂತ! ಒಳ್ಳೆ ಬುದ್ಧಿವಂತ!

ಆಗಂತುಕ–ಹಾಗೋ.

ಗುರು–ಹೌದು ನೋಡಿ, ಅವನಿಗೆ ಥೂ, ಛಿ, ಎಂಬ 2 ಮಾತುಗಳಿಂದ ಕನ್ನಡ ವ್ಯಾಕರಣದಲ್ಲಿ ಲಿಂಗಜ್ಞಾನವಾಗುತ್ತೆ.

ಆಗಂತುಕ–ನಿಜವೇನು ಸ್ವಾಮಿ? ಎಲ್ಲಿ, ಪ್ರಶ್ನೆ ಮಾಡಿ, ನೋಡಿರಿ!

ಗುರು–(ಶಿಷ್ಯನನ್ನು ಕುರಿತು) ಎಲಾ, ಇಲ್ಲಿ ಬಾ, 'ಮರ' ಯಾವ ಲಿಂಗವೋ?

ಶಿಷ್ಯ–ಪುಲ್ಲಿಂಗ ಸಾರ್.

ಗುರು–ಥು!

ಶಿಷ್ಯ–ಸ್ತ್ರೀಲಿಂಗ ಸಾರ್.

ಗುರು–ಛಿ!

ಶಿಷ್ಯ–ನಪುಂಸಕಲಿಂಗ ಸಾರ್.

ಗುರು–(ಹಸನ್ಮುಖದಿಂದ) ನೋಡಿದಿರಾ; ನಾನು ಹೇಳಲಿಲ್ಲವೇ–ಬಲುಬುದ್ಧಿವಂತನೆಂದು!

ನಗುವ_ನಂದ.

# ಮೈಸೂರು ನರ್ಸಣ್ಣನ ಪಂಚಾಂಗ!

## (TIT-BITS)

## (ಟಿಟ್-ಬಿಟ್ಸ್)

ಜೈ! ಮೈಸೂರು ಮಹಾರಾಜಕೀ! ಜೈ! ಸರ್ ಮಿರ್ಜಾ ಇಸ್ಮಾಯಿಲ್‌ಕೀ ಜೈ! ಮೈಸೂರ್ ನರ್ಸಣ್ಣಾಕೀ ಜೈ! ನನ್ನ ನವ ಪಂಚಾಂಗ ಮಾಡಿದ್ದೇನೆಯ್ಯಾ. ಬಹ್ಳ ಅಚ್ಛಾ ಇದೆ ರಾಜಾ! ಮುಕ್ಕಾಲು ಒಂದನ್ನು ಕೊಟ್ಟು ಕಡ್ಡಿ ಹಾಕ್ರಿ ಸಾಮಿ. ನನ್ನ ಪಂಚಾಂಗ ನಿಮ್ಮ ಸ್ಥಿತಿಗತಿ, ಭವಿಷ್ಯ ಹೇಳುತ್ತೆ. ಹಾಗೆ! ಬನ್ನಿ ದೇವ್ರೆ ಬನ್ನಿ! ಕಡ್ಡಿ ಹಾಕಿ! ಮೆಲ್ಲ—ಪುಸ್ತಕ ಹಾಳಾದೀತು. ಹಾಕಿದ್ರಾ ಕಡ್ಡೀ! ಒಳ್ಳೇದು! ತೆರೆಯುತ್ತೀನಿ. ವ್ಹ ವ್ಹ! ಮೂರ್ನಾಮದ ಬ್ರಾಹ್ಮಣನು ಒಬ್ಬ ಪಂಚಮನನ್ನು ಅಪ್ಪಿಕೊಂಡ ಚಿತ್ರಾ ಬಂದಿದೆ! ಇದರರ್ಥ ಭಾರೀ ಉಂಟು ರಾಜಾ? ಇದ್ರಿಂದ ನಿಮ್ಗೆ ಭಾರೀ ಒಳ್ಳೇದಾಗ್ಲಿದೆ ಕೇಳ್ರಿ! ನಿಮ್ಮ ಶನಿ ಎಲ್ಲಾ ಈ ಹೊತ್ತೇ ಜಾರಿಬಿಡುತ್ತೆ! ನೀವು ಬಡವ್ರರಂತೆ ಸ್ವಲ್ಪ ಬಡವ್ರರಾಗಿರುತ್ತೀರಿ ಸಾಮಿ! ನಿಮಗೆ ನವಯುಗದಲ್ಲಿನ "ತತ್ವ ಶೋಧಕ" ಯೋಗ್ಯತೆ ಸಾಧಕ'ರಂತಹ ವೈರಿಗಳು ಜಾಸ್ತಿ ಕೇಳ್ರಿ. ಕಂಠೀರವದ ಜೋರ್ಜ್ ಹರ್ಬರ್ಟ್‌ರಂತೆ ನೀವು ಅಷ್ಟೊಂದು ಕಾರ್‌ಬಾರಿ ಅಲ್ಲ ಕೇಳ್ರಿ! ನಿಮ್ಗೆ ಅವ್ರ ಹಾಂಗೆ ಗಾಳಿ ಸುದ್ದಿಯ ಮೇಲೆ ಭರವಸೆ ಇಲ್ಲ ರಾಜಾ! ಬೇಡುವವರು ಕಾಲಿನ ಮೇಲೆ ಕೃತ್ರಿಮ ಹುಣ್ಣುಗಳನ್ನು ಉಂಟುಮಾಡಿ ಕಣ್ಣುಕಟ್ಟಿನಿಂದ ದಿನಹರಣೆಮಾಡುತ್ತಾರೆಂದು ತಿಳಿದೊಡನೆ ನೀವು ಅಂತಹ ಕಣ್ಣುಕಟ್ಟಿನವ್ರನ್ನು ಪರೀಕ್ಷೆ 'ಮಾಡಿ ಕಳ್ಳನನ್ನು ಹಿಡಿಯದೆ ಬಿಡ್ವದಿಲ್ಲ. ಅಲ್ಲದೆ ಹರ್ಬರ್ಟ್‌ರಂತೆ ಬೇಡ್ವವರ ಮೇಲೆ ಆರೋಪ ಮಾಡಿ, ಸುಪ್ರಿಡೆಂಟರವರ ಪರಿಚಯ ಹೊಂದಿ ಕುಶಾಲಿನಿಂದ ಸುಮ್ಮನಿರುವುದಿಲ್ಲ! ನೀವು ಭಾರಿ ಉದಾರಿಗಳು ಸ್ವಾಮಿ! ಬೇಡ್ವವರಿಗೆ ಒಂದು ಛತ್ರಾ ಕಟ್ಟಿಸಲು ಮನಸ್ಸು ಮಾಡಿದ್ದೀರಿ ರಾಜಾ! ಅಲ್ಲದೆ ಹರ್ಬರ್ಟ್ರ್‌ರಂತೆ ಬೇರೆಯವ್ರಿಗೆ ಬುದ್ಧಿ ಹೇಳಿ ತಾನು ಉಷ್ಟ್ರಪಕ್ಷಿಯ ಹಾಂಗೆ ಇರುವುದಿಲ್ಲ ಕೇಳಿ! ತಾವು ಅಧಿಕ ಪ್ರಸಂಗಿಗಳಲ್ಲಯ್ಯ, ಕೇಳಿ! ತತ್ವ ಶೋಧಕನ ಹಾಂಗೆ ನೀವು ಬಾಲ್ಯದಲ್ಲೇ ಜಾಲದ ಗುಳಿಗೆ ಬಿದ್ದು ಅಧಿಕ ಪ್ರಸಂಗಕ್ಕೆ ಇಳ್ದು ಅನಾವಶ್ಯಕ ಪರನಿಂದೆಗೆ ಇಳ್ದವರಲ್ಲಾ ರಾಜಾ! ನಿಮ್ಗೆ ಊಟಕ್ಕಿದೆ ರಾಜಾ! ನಿಮ್ಗೆ ಕೆಲ್ಸವಿದೆ ರಾಜಾ! ನೀವು ಹರ್ಕು ಈಜಿಚೆಯರಿನ ಮೇಲೆ ಒರಗಿ ಅದರಲ್ಲಿ ಊಟ ಮತ್ತು ಭೇದಿ ಮಾಡ್ವವರಂತಹ ಸ್ಥಿತಿಗೆ ಬರ್ವದಿಲ್ಲಾ ರಾಜಾ! ನಿಮ್ಮ ಪಂಚಅಂಗವು ಅಂದ್ರೆ ಕೈಕಾಲು ಸರಿಯಿದೆ ದೇವಾ! ದುರ್ಜನರಿಗೆ ದೇವರು ಶಿಕ್ಷೆ ಕೊಡುವಂತೆ ನಿಮ್ಗೆ ಕೊಟ್ಟಿಲ್ಲ ರಾಜಾ! ನೀವು ಬೇರೆಯವ್ರ ಚಾಡಿಗಳನ್ನು ಕಿವಿ ಮೇಲೆ ಹಾಕ್ಕೊಳ್ಳುವವರಲ್ಲ ನೋಡಿ! ನಿಮ್ಗೆ ಕನ್ನಡ ಬರಹ ಗೊತ್ತು. ತಲೆ ಹೋಕರ ಮಾತು ಕೇಳಿ ನೀವು 'ಶೋಧಕ'ನ ಹಾಂಗೆ ಪೇಪರುಗಳಿಗೆ ಬರೆವುದಿಲ್ಲ. ನವಯುಗದ ಪ್ರಿಯ ಸಂಪಾದಕ್ರು 'ರಿಜಕ್ಟು' ಮಾಡಿದ್ರೂ, ಮೂರು ಮೂರು ಸಲಾಂ ಕೊಟ್ಟು ಸಂಪಾದಕ್ರ ಪಾದತೀರ್ಥವನ್ನ 'ಕುಡಿದು, ಆರ್ಟಿಕಲ್ಲನ್ನು ತತ್ವಶೋಧಕನು ನವಯುಗದಲ್ಲಿ ಪ್ರಕಟ ಮಾಡ್ಸಿದಂತೆ ನೀವು ಮಾಡುವವರಲ್ಲ! ತತ್ವಶೋಧಕನ ಮುಂದಿನ ಲೇಖನಗಳಿಗೆ ಗತಿಯಿಲ್ದೆ ಸಾಯ್ವುಂತೆ ನಿಮ್ಮ ಪಾದದ ದೂಳೂ ಸಾಯದು ರಾಜಾ! ನೀವು 'ಬಡವ್ರ ಬಂಧು'ವಿನ ಸಂಪಾದಕ್ರ ಹಾಂಗೆ ಖಾಲಿಪೋಲಿ ಜನ್ಗಳನ್ನು ಕ್ಯಾರ್ ಮಾಡ್ವವರಲ್ಲ!—ನ್ಯಾಯನಿಷ್ಠರು ರಾಜಾ! ನಿಮ್ಗೆ ಹಗೆತನವಿಲ್ಲ ಕೇಳ್ರಿ! ಬಡವ್ರಬಂಧುವಿನ ಗ್ರಾಹಕರು ಅನಿರೀಕ್ಷಿತವಾಗಿ ಹೇಗೋ ಹೆಚ್ಚಿದುದನ್ನು ಕಂಡು ಎದೆಯುರ್ರಿಕೊಳ್ಳುವ ಕೆಲ ಕಾಕಪೋಕ ಉಂಡಾಡಿ ಗುಂಡುಭಟ್ರಂತಲ್ಲ ನೀವು ರಾಜಾ! ನಿಮ್ಗೆ ಎದ್ರುಕೋಪವಿಲ್ಲ ದೇವ್ರೇ. ಆ ತಿಂಗ್ಳ ತನ್ಗ ಹಣಾ ಕೊಡದಿದ್ರೂ, ಒಂದು ಸಂಚಿಕೆಯು ಅವ್ರ ಕಪ್ಪಿನಿಂದ್ಲೇ ಸಿಗದೆ ಹೋದುದಕ್ಕೆ ಒಬ್ಬರು 'ಬಡವ್ರ ಬಂಧು' ಬಡ ಡಿಲಿವೆರಿ ಹುಡುಗ್ರಿಗೆ ಬೈದ ಹಾಂಗೆ ನೀವು ಬೈಯುವವರಲ್ಲ ನೋಡಿ! ನೀವು ಭಾಷೆಯವರು ನೋಡಿ! ಮೋಸಗಾರ ಹಾಸೆಯವ್ನಲ್ಲ ಸಾಮಿ! ನೀವು ಸರ್ಕಾರಿಗಳಂತೆ ಕಾಂಗ್ರೆಸ್ಸಿಗೆ ಹೆದ್ರುವವರಲ್ಲ! ನೀವು ಸರ್ ಜೋರರ ಹಾಂಗೆ ಮಾತಿನ ಮಲ್ಲರಲ್ಲ ಕೇಳಿ. ಶೊಕತಾಲಿಯವ್ರ ಹಾಂಗೆ ಬಡಾ ಹೊಟ್ಟೆಯ ಶಾಂತಿಸ್ಥಾಪಕರಲ್ಲ, ಎಡ್ನೀರು ಮಠದ ಸ್ವಾಮಿಗಳಂತೆ ಧನಿಕರಲ್ಲ! ಕೋಳಿ ಜೂಜು, ಕೋಣ ಓಟದಲ್ಲಿ ನಿಮ್ಗೆ ಮನ್ಸಿಲ್ಲ ಕೇಳ್ರಿ! ಡೋಂಗಿ ವಾಲಂಗೆ ಡೋಂಗಿ ಮಾಡುವ ಅಸ್ಸಲ್ ಡೋಂಗಿ ಕುಠಾರಿಯಯ್ಯ ನೀವು! (ಕೋಪಗೀಪ ಮಾಡ್ಬೇಡಿ) ನಿಮ್ಗೆ ಸಿರಿಸಂತರ ಬಾಲ ಹಿಡಿಯುವ ಅಭ್ಯಾಸವಿಲ್ಲ ಕೇಳಿ! ದೊಡ್ಡ ವಕೀಲರ, ಸಂಪಾದಕ್ರು, ವ್ಯಾಪಾರಸ್ಥರ ಬಾಲದ ತುದಿಯಲ್ಲಿ ಕುಳಿತುಕೊಳ್ಳುವ ನಿಮ್ಮೂರ ಕೆಲವು ತಾಜಾ ಬಂಗಾಲಿಗಳಂತೆ ಅಲ್ಲಾ ರಾಜ ನೀವು! ಒಂದು ಸಣ್ಣ ಸಿಟಿಶನಿಗೆ 5 ರೂಪ್ಯಾ ಪಡೆಯುವಷ್ಟು ಗುಂಡು-ಒಳ್ಗೆ ರಾಜರಲ್ಲವಯ್ಯಾ ನೀವು! ಮುನ್ಸಿಪಾಲಿಟಿಯ ಬಿಲ್ ಕಲೆಕ್ಟರರು ಕೆಲವ್ರು ವ್ಯಾಪಾರಸ್ಥರಿಗೆ ಒಂದೆರಡು ದಿನಕ್ಕೆ ಹಣ ಸಾಲ ಕೊಟ್ಟು ಬಡ್ಡಿ ಪಡೆಯುವಂತೆ ನೀವು ಹಣ ಮಾಡುವ 'ಜೂ'ಗಳಲ್ಲಯ್ಯಾ! ಸೇವೆಯಲ್ಲಿ ನಿಮಗೆ ಗೂಢ ಆಶೆಯಿಲ್ಲ ಕೇಳಿ! ಹರಿಜನ ಸೇವೆಗೆಂದು ಮೈದಾನ್ ಮೇಲೆ ಭಾಷಣ ಮಾಡ್ವ ಕೆಲ ಮಿಸ್ಟರುಗಳಂತೆ ಟೀಪು ಸುಲ್ತಾನ ಕಾಲದ ಅಂಧಾದರ್ಬಾರಿಗಳಲ್ಲಯ್ಯಾ! ಪರರಿಗೆ ಹೇಳ್ವ ಮೊದ್ಲು ಮಾಡಿ ತೋರಿಸುವವರು ನೀವು! ಹರಿಜನ ಸೇವಾ ಸಂಘದ ಒಬ್ಬ ಸದಸ್ಯರು ತನ್ನ ಮನೆ ಬಾಗ್ಲಿಗೆ ಬಂದ ಬೇಡುವವರಿಗಾಗಲೀ ಹರಿಜನರ್ರಿಗಾಗ್ಲಿ ಕಿಲ್ಬು ಹಿಡ್ದು ಮೂಲೆಯಲ್ಲಿರುವ ಒಂದು ಚಿಕ್ಕ ಪೈಯನ್ನೂ ಅರೆ ದಿನ ತಡೆದರೂ ಎಸೆಯದಿರುವಂತೆ ನೀವಲ್ಲ ಕೇಳ್ರಿ! ಅದು ಇಲ್ಲೇ ತಿಳಿಯುತ್ತೆ. ನಿಮ್ಗೆ ಹೋದಲ್ಲಿ ಮೂರು ನಾಮ! ನಿಮ್ಮನ್ನು ಹೋದಲ್ಲಿ ಅಜಾತೀಯ ಅಂದ್ರೆ ಪುರುಷರಲ್ಲದವರು ಅಪ್ಪಿಕೊಳ್ಳುತ್ತಾರೆ. ಕೆಲವು ಸಿಟಿಸನರಂತೆ ನಿಮ್ಮ ಹಾಸಿಗೆ ದಿನಕ್ಕೊಂದು ಮನೆಗೆ ಹೋಗೋದಿಲ್ಲಾ! ನಿಮ್ಮಲ್ಲಿ ಡಾಂಭಿಕ ಔದಾರ್ಯವಿಲ್ಲ ನೋಡಿ. 'ನಾಗಸೇನೆ'ಯ ಕೆಲ ಕೊಂಗ್ರೆಸ್‌ವಾಲರಂತೆ ನೀವು ಹುಡುಗಾಟಿಕೆಯವ್ರಲ್ಲ ಕೇಳಿ! 'ಏನೂ ಕೆಲ್ಸ ಇಲ್ದ ಆಚಾರಿ ಮಗುವಿನ ಕುಂಡೆಯನ್ನ ಕೆತ್ತಿದ' ಎಂಬ ಗಾದೆಗೆ ಗಂಟುಬೀಳುವವರಲ್ಲವಯ್ಯಾ ನೀವು! ಬಿ. ಎ, ಎಲ್. ಟಿ. ಮಾಸ್ತರರೊಬ್ರು ಬಡವ್ರ ಬಂಧುವನ್ನು ಪಡೆಯುತ್ತಾ ಬಂದು, ಹಣಾ ಕೇಳಿದಾಗ "ಕೊಡಲು ನಾ ಹೇಳಲಿಲ್ಲ" ಎಂದಂತೆ ನೀವು ಅನ್ನುವವರಲ್ಲ ರಾಜಾ! ನಿಮ್ಮ ಹೆಂಡ್ತಿ ಗರ್ಭಿಣಿ ರಾಜಾ! ನಾಲ್ಕು ಪುರುಷ ಮಕ್ಳು ಹುಟ್ಟುತ್ತಾರೆ ದೇವಾ! ಅವ್ರಲ್ಲಿ ಒಂದು ಮಗು ಮುಂದಕ್ಕೆ ಬಡಾ ಮೋಟರ್‌ವಾಲನಾಗಿ, ಕೆಲವ್ರನ್ನು ಅಡಿಗೆ ಹಾಕಿ ಕೊಂದು ಶವಗಳನ್ನು ಬಾವಿಗೆಸೆಯುವನು. ನಿಮ್ಮ ಇನ್ನೊಬ್ಬ ಮಗಾ ಟೇಕ್ಸ್ ಕೊಡ್ದೆ, ಮೋಟರುಗಳನ್ನು ಹಿಡಿಯುವ ಪೋಲಿಸ್ರಿಗೆ, ಬಹಳ ಹಣಾ ಲಂಚ ಕೊಟ್ಟು ವ್ಯಾಪಾರ ಮಾಡಲಿದೆ ರಾಜಾ! ಒಂದು ಮಗು ಬೆಂಚ್ ಮೇಜಿ ಸ್ಟೇಟ್, ಪದವಿಗೇರಿ, ಅಲ್ಲಿ ಕಣ್ತೆರೆದು ನಿದ್ರೆ ಮಾಡ್ಲಿದೆ ರಾಜಾ! ಬಾಯಿಗೆ ಕರವಸ್ತ್ರ ತುರ್ಕಿಸಿಕ್ಕೊಂಡು ಕಿವಿಗೆ ಹತ್ತಿಯನ್ನ ತುಂಬ್ಸಿ, ಕುರ್ಚಿ ಬಿಸಿ ಮಾಡ್ಲಿದೆ ನೋಡಿ! ಒಂದು ಮಗ ಮನೆಯಲ್ಲಿ ಮಲ್ಗಲಿಕ್ಕಿಲ್ಲ ಕೇಳಿ! 'ತತ್ವ ಶೋಧಕನ ಯೋಗ್ಯತೆ' ಅದಕ್ಕಿರಲಿಕ್ಕಿಲ್ಲ ದೇವ್ರೆ! ಹರ್ಬರ್ಟ್ರ್ ಬೋಧನೆ ತಂಗಾಳಿಯೂ ಅದಕ್ಕೆ ಬೇಡವಾದೀತು! ಅವ್ರ ರಾಗವನ್ನದು ಕೇಳಲಿಕ್ಕಿಲ್ಲ. ಅದಕ್ಕೆ ಹರ್ಬರ್ಟ್ರ್‌ರಂತೆ ಇಂಗ್ಲೀಷ್ ಫೇಸು ತಿಳಿಯಲಿಕ್ಕಿಲ್ಲಾ! "ಗುಡ್ ಬುಕ್, ಬೇಡ್ ಬುಕ್" ಅಂದ್ರೆ ಆ ಮಗು ಕೋಪದಿಂದ ಬುಕ್ ಬುಕ್ ಎನ್ನುವುದು! ಒಬ್ಬ ಶರ್ಮರೂ ಕೆಲವು ತರುಣರೂ ಮಡಿಕೇರಿಯ ಸಾಹಿತ್ಯ ಪರಿಷತ್ತಿನಲ್ಲಿ ಗಲಾಟೆಯೆಬ್ಬಿಸಿ, ಅದನ್ನು ಸಾಯ್ವ ಪರಿಷತ್ತು ಮಾಡ್ಲಿಕ್ಕಿದ್ದಂತೆ ನೀವು ಗಲಾಟೆಗಾರರಲ್ಲ ಸಾಮಿ! ಪೇಪರ್ ರಿಸೊಲ್ಯೂಷನ್, ಪದ್ಯ ಗದ್ಯವಾಚನ, ಸಮ್ಮೇಳನ, ಅವಹೇಳನ ಮಾಡಿ ತಲ್ಗೆ ಕೈಯಿಟ್ಟು ನೀವು ಹಿಂದೆ ಬರುವಷ್ಟು ದುರದೃಷ್ಟಿಯಲ್ಲ ಸಾಮಿ! ನಿಮ್ಮ ಒಬ್ಬ ಮೊಮ್ಮಗನು ಜಾತಿಹೀನ ಹುಡುಗಿಯನ್ನು ಲಗ್ನವಾಗುವನೆಂದು ಸುದ್ದಿಯಾಗ್ವದು. ಒಡನೆ ನೀವೂ ಮನೆಯವರ್ರೂ ಕೂಡಿ ಅವ್ನನ್ನು ಮನೆ ಹೊರಗೆ ಹಾಕುವಿರಿ! ಅವನು ಹಣಾ ಕದ್ದನೆಂದು ಇಲ್ಲದ ಸಲ್ಲದ ಆರೋಪಹೊರಿಸಲೆತ್ನಿಸುವಿರಿ! ಕೊನೆಗೆ ಅವನ ಧರ್ಮವು ಜಯಿಸುವುದು, ನಿಮ್ಮ ಕರ್ಮವು ಸೋಲುವುದು. ನಿಮ್ಮ ಮತ್ತೊಬ್ಬ ಪುತ್ರರು ಒಂದು ಬೇಂಕನ್ನು ಸ್ಥಾಪಿಸುವರು. ಹೆಚ್ಚು ಹಣಾ ಬಂದೊಡನೆ ರಾತಾರಾತ್ರಿ ಬೇಂಕಿಗೆ ಥೇಂಕ್ಸ್ ಕೊಟ್ಟು ಓಡುವರು. ಒಬ್ಬರು ತಂದೆಗೆ ಹೊಡ್ತಾರು! ಒಬ್ರು ತಾಯ್ಗೆ ತುಳ್ತಾರು! ಒಬ್ರು ಸಿಕ್ಕದೆ ಓಡ್ತಾರು! ಒಬ್ರು ಓಡಿಯೂ ಸಿಕ್ತಾರು! ಈಗ ಹೊತ್ತಾಯ್ತು! ಇನ್ನೊಂದು ಮುಕ್ಕಾಲು ಹಾಕಿದ್ರೆ ಹೆಂಡ್ತಿಯ ವಿಷಯ ಹೇಳ್ತೇನೆ! ಬೇಡವೇ? ಹಾಗಾದ್ರೆ ವಕೀಲ್ರೊಬ್ರು ಬರಹೇಳಿದ್ದಾರೆ! ಅಲ್ಲಿಗೆ ಹೋಗುತ್ತೇನೆ ರಾಜಾ! ನಮಸ್ಕಾರ ರಾಯ್ರೇ—ಬಿಜ್ಕೊಂಡೆ.

(ಮುಂದುವರಿಯುವುದು.)

# ಭೋಜನ ನಂತರ ಆಲ್ವಾರ್ ಮಹಾರಾಜರ ಅಸೌಖ್ಯ

## — ನ ಮ ಗೆ —

ಕೊಡಗು, ಧಾರವಾಡ, ಮಡಿಕೇರಿ, ಮದ್ರಾಸು, ಗೋವಾ, ಸಕಲೇಶಪುರ, ಚಿಕ್ಕ ಮಗಳೂರು, ಮೂಡಬಿದ್ರಿ, ಬೆಳ್ತಂಗಡಿಗಳಲ್ಲಿ ಏಜಂಟರು ಬೇಕಾಗಿದ್ದಾರೆ. ಶೇಕಡಾ ೨೫ ಕಮಿಶನ್ ಕೊಡುತ್ತೇವೆ. ಏಜನ್ಸಿಯನ್ನು ಪಡೆಯಲಿಚ್ಛಿಸುವವರು ಕೂಡಲೇ ಬರೆಯಬೇಕು. ಮೆನೇಜರ್, **"ಬಡವರ ಬಂಧು"** ಮಂಗಳೂರು.

ಕಳೆದ ಸಲದ ಒಗಟಿನ ಬಿಚ್ಚುಗರಲ್ಲಿ ಬಿಟ್ಟುಹೋದ ಹೆಸರುಗಳು:— ಶ್ರೀಮತಿ ಸುರತ್ಕಲ್ ರುಕ್ಕುಬಾಯಿ, ಸುರತ್ಕಲ್ ವೆಂಕಪಿ. ಕರ್ಕೇರ, ಕಾಪ್ ಚರ್ದಪ್ಪ ಎನ್. ಶೆಣೈ, ವಿಠಲ ಕೆ. ಶೆಟ್ಟಿ.

—ಮಹಾಲಪುರದ ಡಿ. ಎ. ವಿ. ಕೊಲೇಜಿನ ಥಾಕೂರ್ ರಾಮಸಿಂಘರೆಂಬವರಿಗೆ ಮೆನೇಜಿಂಗ್ ಬೋರ್ಡಿನ ಮೇಲೆ ಸಿಟ್ಟಾಗಿ ಅವರು ಉಪವಾಸ ವ್ರತತೊಡಲು ನಿರ್ಧರಿಸಿರುವರು. ಉಪಾಧ್ಯಾಯರೇ ಹೀಗೆ ಮಾಡಿದರೆ ಹುಡುಗರೋ?

—ಡಾ। ಮಹಮ್ಮದ್ ಆಲಮರೆಂದರೆ ಮುಸ್ಲಿಮರಲ್ಲಿ ಒಳ್ಳೇ ರಾಷ್ಟ್ರೀಯವಾದಿ. ಇವರು ಅಫ್ರಿಕದ ಕೆನ್ಯಾಕ್ಕೆ ತೆರಳಬೇಕೆಂದು ಬಗೆದರು. ಆದರೆ ಅವರು ಜೈಲಿಗೆ ಹೋದವರಾದುದರಿಂದ ಅಲ್ಲಿ ಬರಬಾರದೆಂದು ಆಫ್ರಿಕದ ಓರ್ಡರು! ಖರ್ಚು ಉಳಿಯಿತು.

—ಆಲ್ವಾರಿನಲ್ಲಿ ಮುಸಲ್ಮಾನ ಪುಂಡರ ಮಹಾ ಭಂಡಾಯ! ಬ್ರಿಟಿಷ ಸೈನ್ಯವು ಹೋಗಿ ಎಲ್ಲರನ್ನೂ ಹಿಡಿದು ಸೋಲಿಸಿಬಿಟ್ಟಿತು.

—ಕಳೆದ ತಿಂಗಳ ಮಧ್ಯೆ ಒಂದು ದಿನ ಆಲ್ವಾರಿನ ಮಹಾರಾಜರು ಊಟಮಾಡಿ ಎದ್ದೊಡನೆ ಅಸ್ವಸ್ಥರಾದರು. ಅಡಿಗೆಭಟ್ಟನನ್ನೂ ಇನ್ನಿತರ ಕೆಲಸದವರನ್ನೂ ಕೆಲಸದಿಂದ ಗಡಿಪಾರು ಮಾಡಿರುವರು. ಕಾರಣ?

—ಸಾವಿರದ ಆರುನೂರು ಗಾಂಧೀ ಮಾರ್ಕಿನ ಚಿಮಿಣಿ ಎಣ್ಣೆಯು ಇಲ್ಲಿಯ ಬರ್ಮಾಶೆಲ್ ಕಂಪೆನಿಯವರಿಗೆ ಬಂದಿದೆ. ಡಬ್ಬಿ ೧ರಲ್ಲಿ ೧೦ ಆಣೆ ಕಡಿಮೆ ಬೆಲೆ ಇಟ್ಟಿರುವರು.

—ತಾ. ೫—೨—೩೩ನೇ ದಿನ ಮಿತ್ರ ಮಂಡಳಿಯ ಆಶ್ರಯದಲ್ಲಿ ಒಂದು ಕನ್ನಡ ಭಾಷಣ ಸ್ಪರ್ಧೆ ನಡೆಯಲಿರುವುದು. ನಾಲಿಗೆ ನಯವಿರುವವರಿಗೆ ಇನಾಮು ದೊರೆಯುತ್ತದೆ.

—ಪ್ರೇಗ್ ಪಟ್ಟಣದಲ್ಲಿ ೫೭ ವರ್ಷ ಪ್ರಾಯದ ಒಬ್ಬಳು ಸ್ತ್ರೀಯು ನಿರುದ್ಯೋಗಿಗಳ ವಿಪನ್ನಾವಸ್ಥೆಯನ್ನು ಕಂಡು ಮರುಗಿ, ತನ್ನಲ್ಲಿದ್ದ ೫೫ ಪೌಂಡುಗಳ ಮೌಲ್ಯವನ್ನು ಅಂತಹ ಜನರಿಗಾಗಿ ಕೊಡಬೇಕೆಂದು ಬರೆದಿಟ್ಟು ನಿಸ್ವಾರ್ಥತೆಯಿಂದ ಪ್ರಾಣಹತ್ಯೆ ಮಾಡಿಕೊಂಡಳೆಂಬ ವಾರ್ತೆ! ಧನ್ಯೆ! ಧನ್ಯೆ! ಬೇರೆಯವರು ಮಾಡುವುದನಗತ್ಯ!

—ಸ್ವಿಜರ್‌ಲೇಂಡಿನಲ್ಲಿ ೬೦೦೦ ಅಡಿಗಳ ಎತ್ತರದಲ್ಲಿ ಹಾರ್‍ಯಾಡುತ್ತಿದ್ದ ಒಂದು ವಿಮಾನವು ಅದರ ವೈಮಾನಿಕನ ಸಮೇತ ಕೆಳಬಿದ್ದು ಭೂಮಿಗೆ ಮುತ್ತಿಕ್ಕಿತು. ಹಿಂಕ್ಲರ್ ಎಂಬವನು ಸ್ವರ್ಗಸ್ಥನಾದನು.

—ಜರ್ಮನ್ ಸರಕಾರಕ್ಕೆ ಬಣ್ಣ ತಯಾರಿಗೋಸ್ಕರ ೨,೦೦,೦೦೦ ಬಿಳೀ ಚಿಟ್ಟೆಹುಳುಗಳು ಬೇಕಾಗಿವೆಯಂತೆ! ಬೇಕಾದವರು ಕಳುಹಿಸಬಹುದು.

—ಮಿಡ್ನಾಪುರದ ಡಿ. ಮೆಜಿಸ್ಟ್ರೇಟರನ್ನು ಗುಂಡು ಹೊಡೆದು ಕೊಂದ ಪ್ರದ್ಯೋತ ಕುಮಾರ ಭಟ್ಟಾಚಾರ್ಯನೆಂಬವನು ಪಾಶಿಗೆ ಏರಿದನು!

—ಕೊಂಗ್ರೆಸ್‌ವಾಲರಾಗಿದ್ದ ಕಾಶೀ ವಿದ್ಯಾಪೀಠದ ರಿಜಿಸ್ಟ್ರಾರರಾದ ಶ್ರೀ. ಬೀರ್ಬಲ ಸಿಂಘರೆಂಬವರಿಗೆ ಒಂದು ವರ್ಷದ ಕಠಿಣ ಸಜೆ! ೧೦೦ ರೂಪಾಯಿ ದಂಡ ತಪ್ಪಲಿಲ್ಲ.

—ಮುಂಬಾಯಿಯ ಶ್ರೀ। ಆರ್. ಕೆ. ಹರ್ಡೀಕರ್ ಎಂಬವರು ಊರಿಂದ ಹೊರಟು ಹೋಗಬೇಕೆಂದು ಅಪ್ಪಣೆ. ಶ್ರೀಯುತರಲ್ಲಿ ಕಾಸಿರಲಿಲ್ಲ! ಏನು ಮಾಡುವರು? ಕೂತಲ್ಲೇ ಕುಳಿತು ಪೋಲೀಸರ ಭೇಟಿಗೆ ದೊರೆತರು.

—ನಾಗಪುರದಲ್ಲಿ ೨೫ ಜನರು ಒಂದು ಲೋರಿಯಲ್ಲಿ ಕೂತು ರಭಸದಿಂದ ಓಡುತ್ತಿರುವಾಗ ಚಕ್ರಗಳ ಟಾಯರು ರಭಸದಿಂದ ಒಡೆದು, ಲೋರಿ ರಭಸದಿಂದ ಖಣಿ ಬಿದ್ದು ಒಬ್ಬನು ರಭಸದಿಂದಲೇ ಪರಲೋಕ ಯಾತ್ರೆ ಮಾಡಬೇಕಾಯಿತು! ಡ್ರೈವನದು ತಪ್ಪಿಲ್ಲ!

—ಕಳೆದ ತಿಂಗಳಾದಿಯಲ್ಲಿ ಜೋರ್ಜ್ ಬರ್ನಾಡ್ ಶೋ ಎಂಬ ಮಹಾ ನಾಟಕಕಾರರು ಮುಂಬಾಯಿಗೆ ಬಂದಿದ್ದರು. ಶೋರವರು ೭೦ ವರ್ಷದ ವೃದ್ಧ! ಕೋಪ ಹೆಚ್ಚು!

—ಕಲ್ಕತ್ತದಲ್ಲಿ ಶ್ರೀ। ಜೆ. ಕೆ. ಸರ್ಕಾರ್ ಎಂಬವರು ಸರಕಾರವನ್ನೇ ಧ್ಯಾನಿಸುತ್ತ ರೈಲು ಯಾತ್ರೆ ಮಾಡುತ್ತಿದ್ದರು. ಅಷ್ಟರಲ್ಲಿ ಅವರ ಕಣ್ಣಿನ ಮೇಲೆ ಒಂದು ಬಗೆಯ ಹುಡಿ ಬಿತ್ತು! ರಾಯರಿಗೆ ಕಣ್ಣು ಕಾಣಲಿಲ್ಲ. ನಿಮಿಷಾರ್ಧದಲ್ಲಿ ಅವರ ಜೇಬನ್ನು ಯಾರೋ ಬರಿದು ಮಾಡಿ ಓಡಿದರು!

—ಮುನಿಚ್‌ನಲ್ಲಿ ಕಳ್ಳಾಟಕೆಯಿಂದ ಮಹಾ ಶ್ರೀಮಂತನಾದ ಒಬ್ಬನು ತಾನು ಎಲ್ಲಿಂದೆಲ್ಲ ಎಷ್ಟೆಷ್ಟು ಕದ್ದಿದ್ದನೋ ಅದನ್ನು ಹಿಂತಿರುಗಿ ಕೊಡಲು ನಿರ್ಧರಿಸಿರುವನು. ಒಬ್ಬಳು ಸ್ತ್ರೀಯ ೧೦,೦೦೦ ಪೌಂಡ್‌ಗಳನ್ನು ಕದ್ದಿದ್ದು ಈಗ ಹಿಂದೆ ಕೊಡುವೆನೆಂದು ಆವಳಿಗೆ ಬರೆದಿರುವನು. ಒಳ್ಳೆದಾದ ಮೇಲೆ ಬುದ್ಧಿ! ಕೆಟ್ಟ ಮೇಲಲ್ಲ!

—"ಜೈಲಿನ ಒಳಗಿದ್ದವರೊಡನೆ ನಾವು ಮಾತನಾಡುವುದಿಲ್ಲ" ಎಂದು ಲಂಡನಿನಿಂದ ಹಿಂತಿರುಗಿದ ಸಪ್ರೂ ಜಯಕರರು ಹೇಳಿದರು! ಲಂಡನಿನ ಗಾಳಿ ಅಂತಹದು!

ಮುಂಬಾಯಿ ಬಂದರಕ್ಕೆ ಚಿತ್ರಾಲ್ ಸ್ಟೀಮರು ಬಂದು ತಲಪಿತು. ಅದರಲ್ಲಿದ್ದ ಕೆಲವು ಮುಸ್ಲಿಮ ಕೆಲಸಗಾರರೊಳಗೆ ದ್ವಂದ್ವಯುದ್ಧವು ನಡೆಯಿತು. ಅವರನ್ನು ಡಿಸ್‌ಮಿಸ್ ಮಾಡಲಾಯಿತು!

—ಅಹ್ಮದಾಬಾದಿನಲ್ಲಿ ಬಹಳ ರಹಸ್ಯದಿಂದ ಸ್ಥಾಪಿತವಾದ ಕಳ್ಳನಾಣ್ಯ ತಯಾರಿಯ ಒಂದು ಕಾರ್ಖಾನೆಯು ಸಿದ್ಧವಾಗಿದ್ದಿತು. ಈಗ, ಅದರ ಮಾಲಿಕರಾದ ಕೆಲ ಅಕ್ಕಸಾಲಿಗರನ್ನು ಸೆರೆಹಿಡಿದಿರುತ್ತಾರೆ. ಪಾಪ!

—ಕಲ್ಕತ್ತದಲ್ಲಿ ಕೆ. ಪಿ. ಸೇನರೆಂಬ ಸರಕಾರೀ ಉದ್ಯೋಗಸ್ಥರನ್ನು ಕೊಂದುದಕ್ಕೆ ಕಾಳಿಪಾದ ಮುಖರ್ಜಿ ಎಂಬವನನ್ನು ಗಲ್ಲಿಗೇರಿಸಿದರು.

—ಮುಂಬಾಯಿ ಮೊಗವೀರ ಸ್ಪೋರ್ಟ್ಸ್ ಕ್ಲಬ್ಬಿನ ಪಂಚವಾರ್ಷಿಕೋತ್ಸವವು ಮೊನ್ನೆ ಶ್ರೀ। ಹ್ಯೂಗೆ ಬಜಾರ್ ಸೋಮಯ ಮೆಂಡನ್‌ರವರ ಅಧ್ಯಕ್ಷತೆಯಲ್ಲಿ ಜರಗಿತು.

— ಕಳೆದ ತಿಂಗಳಾದಿಯಲ್ಲಿ ಮುಂಬಾಯಿಯ ಕವಾಸ್ಜಿ ಪಟೇಲ ರಸ್ತೆಯ ೫ನೇ ಕಟ್ಟಡದಲ್ಲಿ ಶ್ರೀ। ವಿ. ಆರ್. ಪರುಲೇಕರ್‌ರವರ ಪ್ರೋತ್ಸಾಹನದಿಂದ ಒಂದು ಪ್ರಾಥಮಿಕ ಶಾಲೆಯ ಸ್ಥಾಪನೆಯಾಗಿದೆ. ಇದು ಚಿರಕಾಲ ಬಾಳಲಿ!

—ಮಹಾತ್ಮಾ ಗಾಂಧಿಯವರನ್ನು ಬೇಗನೇ ಬಿಡುಗಡೆ ಮಾಡಲಿದ್ದಾರೆಂದು ಜವಾಬ್ದಾರೀ ಪಕ್ಷದವರ ವರ್ತಮಾನ! ಲಂಡನಿಗೆ ಪುನಹ ಹೋಗುವರೆ?

ಇದೇ ತಾ. ೩೦ನೇ ಸೋಮವಾರ ದಿನ ರಾತ್ರಿ ಶ್ರೀ ಗೋಕರ್ಣನಾಥ ಕ್ಷೇತ್ರದಲ್ಲಿ ಬೆಂಗಳೂರಿನ ದಿವಂಗತ ರಾವ್ ಸಾಹೇಬ ಕೆ. ನೆಟ್ಟಕಲ್ಲಪ್ಪನವರ ಪುತ್ರರಾದ ಶ್ರೀ। ಕೆ. ಎನ್. ಅಂಜನಪ್ಪನವರು ರಾವ್ ಬಹದ್ದೂರ್ ಎನ್. ಎನ್. ಸುವರ್ಣರ ಸೊಸೆ ಕುಮಾರಿ ಲೀಲಾವತಿಯನ್ನು ವಿವಾಹವಾದರು. ಸಾವಿರಾರು ಜನರು ನೆರೆದಿದ್ದರು.

---

## ನೋಟೀಸು.

ಮುಂಬಾಯಿ, ಮೈಸೂರು, ಬೆಂಗಳೂರು, ಪುತ್ತೂರು, ಕಾರ್ಕಳ, ಚನ್ನಪಟ್ಣ, ಉಡುಪಿ, ಕಾಸರಗೋಡು, ಹೈದರಾಬಾದು, ಮೊದಲಾದ ಎಲ್ಲಾ ಕಡೆಗಳ ನಮ್ಮ ಏಜಂಟರು ಪ್ರತಿಗಳ ಮಾರಾಟದ ಹಣವನ್ನು ಪ್ರತಿ ತಿಂಗಳ ೨೫ನೇ ತಾರೀಕಿನೊಳಗೆ ತಪ್ಪದೆ "ಬಡವರ ಬಂಧು" ಮೆನೇಜರರಿಗೆ ತಲಪಿಸಬೇಕು. ಈ ನಿಯಮವನ್ನು ಪರಿಪಾಲಿಸದವರಿಗೆ ನಮ್ಮ ಸಂಚಿಕೆಗಳು ವಿಕ್ರಯಕ್ಕೆ ದೊರೆಯಲಾರವು ಎಂಬುದನ್ನು ದಯವಿಟ್ಟು ಲಕ್ಷಿಸಬೇಕು.

**ಮೆನೇಜರ್.**